ಸುಧಾಕರ ಕರ್ಣಾಟಕ ಗ್ರಂಥಾವಳಿ

ಗ್ರಂಥ ೫

ಶ್ರೀ

# ರುಕ್ಮಿಣೀಸ್ವಯಂವರ

( ನಾಟಕ )



ಬೆಳ್ಳಾವೆ ನರಹರಿಶಾಸ್ತ್ರಿ

ಬೆಳ್ಳಾವೆ ಪುಸ್ತಕಾಲಯ

ಬೆಂಗಳೂರು ನಗರ

೧೯೩೩

## ಈ ಗ್ರಂಥಕರ್ತರ ಇತರ ಗ್ರಂಥಗಳು

ನಾಟಕ—

ಶ್ರೀಕೃಷ್ಣಲೀಲಾ ವಿನೋದ

ಕಂಸವಧ

ಶ್ರೀಕೃಷ್ಣಗಾರುಡಿ

ಶ್ರೀಕೃಷ್ಣ ಪಾರಿಜಾತ

ಮಾರ್ಕಂಡೇಯ

ಮಹಾತ್ಮ ಕಬೀರದಾಸ

ಭೋಜ ಕಾಳಿದಾಸ

ಭೋಜಕುಮಾರ

---

ರಾಜಭಕ್ತಿಕಾವ್ಯ (ಚಂಪು)

ರತ್ನಕುಂಡಲ (ಕಥೆ)

ಕಲ್ಯಾಣಗೀತ ಮಂಜರಿ (ಹಾಡು)

ಶಾಲಾಸಂವಿಧಾನ } ಉಪಾಧ್ಯಾಯರಿಗೆ
ನೀತ್ಯನುಶಾಸನ }



೧೯೩೩

ಪ್ರಕಾಶಕರು :—

ಬೆಳ್ಳಾವೆ ಪುಸ್ತಕಾಲಯ,
ಬಳೇಪೇಟೆ, ಬೆಂಗಳೂರು ನಗರ.

# ಮುನ್ನುಡಿ

ಶ್ರೀಕೃಷ್ಣಪರಮಾತ್ಮನ ಅದ್ಭುತ ಪ್ರತಾಪ ಪ್ರಭಾವಗಳನ್ನು ವಿವರಿಸುವ ಚರಿತ್ರೆಗಳಲ್ಲಿ ಶ್ರೀರುಕ್ಮಿಣೀಸ್ವಯಂವರ ಕಥೆಯು ಒಂದಾಗಿದೆ. ಇದನ್ನು ಮಹಾಕವಿ ರುದ್ರಭಟ್ಟನು ತನ್ನ 'ಜಗನ್ನಾಥವಿಜಯ' ಕಾವ್ಯದಲ್ಲಿ ಉಲ್ಲೇಖಿಸಿರುವ ಸರಣಿಯನ್ನೇ ಬಹುಮಟ್ಟಿಗೆ ಅನುಸರಿಸಿ, ಈ ನಾಟಕವು ರಚಿತವಾಗಿರುವುದು. ಇದರಲ್ಲಿ ಪುರಾಣ ಪ್ರಸಿದ್ಧವಾದ ವಿಷಯಗಳನ್ನು, ಕೂಡಿದ ಮಟ್ಟಿಗೂ ವ್ಯತ್ಯಾಸ ಮಾಡದೆಯೇ ಸಮಯೋಚಿತವಾಗಿ ವಿಸ್ತರಿಸಿ ಚಿತ್ರಿಸಿರುವೆನಾದರೂ, ಅವುಗಳನ್ನು ರಂಗಭೂಮಿಗೆ ತಕ್ಕಂತೆ ಹೊಂದಿಸಲು, ಅಲ್ಲಲ್ಲಿ ಕೆಲವು ನೂತನ ಸಂವಿಧಾನಗಳನ್ನೂ, ಒಂದೆರಡು ನೂತನ ಪಾತ್ರಗಳನ್ನೂ, ಕಲ್ಪಿಸಿಕೊಳ್ಳಬೇಕಾಯಿತು. ಧರ್ಮಾಧರ್ಮಗಳ ಹೋರಾಟದಲ್ಲಿ, ಅಧರ್ಮವು ಎಷ್ಟು ಪ್ರಬಲವಾಗಿದ್ದರೂ, ದೈವಸ್ವರೂಪವಾದ ಧರ್ಮದ ಪಕ್ಷವನ್ನೇ ವಿಜಯಲಕ್ಷ್ಮಿಯು ವರಿಸುವಳೆಂಬ ತತ್ತ್ವವು ಇದರಲ್ಲಿ ವ್ಯಕ್ತಮಾಡಲ್ಪಟ್ಟಿರುವುದು.

ಈ ನಾಟಕವನ್ನು ಗುಬ್ಬಿ ಶ್ರೀಚೆನ್ನಬಸವೇಶ್ವರ ನಾಟಕಸಂಘದ ಮಾಲೀಕರಾದ ಮ|| ರಾ|| ವಿನೋದರತ್ನಾಕರ, ನಾಟಕಚಿಂತಾರತ್ನ ಜಿ. ಹೆಚ್. ವೀರಣ್ಣನವರ ಪ್ರೋತ್ಸಾಹದಿಂದ ನಾನು ಈಗ ಹನ್ನೆರಡು ವರ್ಷಗಳ ಹಿಂದೆ, ಅಂದರೆ ೧೯೨೧ನೆಯ ವರ್ಷದಲ್ಲಿ ಬರೆದು, ಅವರ ನಾಟಕ ಸಂಘಗಳಲ್ಲಿ ಅಭ್ಯಾಸ ಮಾಡಿಸಿದೆನು. ಇದು ಅವರು ಪ್ರದರ್ಶಿಸಿದ ಸ್ಥಳಗಳಲ್ಲಿ ಮಹಾಜನರ ಮೆಚ್ಚಿಗೆಯನ್ನು ಪಡೆದುದಲ್ಲದೆ, ೧೯೨೨ ನೆಯ ವರ್ಷದಲ್ಲಿ ಬೆಂಗಳೂರು ಅಮೆಚೂರ್ ನಾಟಕ ಸಂಘದವರಿಂದ ಏರ್ಪಡಿಸಲ್ಪಟ್ಟಿದ್ದ ನಾಟಕ ಲೇಖನ ಸ್ಪರ್ಧೆಯಲ್ಲಿ ಐವತ್ತು ರೂಪಾಯಿಗಳ ಬಹುಮಾನವನ್ನು ಪಡೆಯುವ ಸುಯೋಗವೂ ಸಹ ಇದಕ್ಕೆ ಲಭಿಸಿತು. ಇದನ್ನು ಮುದ್ರಣಮಾಡಿಸಬೇಕೆಂದು ಅನೇಕ ಸ್ನೇಹಿತರು ನನ್ನನ್ನು ಪ್ರೋತ್ಸಾಹಿಸುತ್ತಿದ್ದರೂ ಕಾರಣಾಂತರಗಳಿಂದ ಇದು ಮುದ್ರಣದ ಬೆಳಕಿಗೆ ಬರುವ ಸಂಧಿಯೊದಗಿರಲಿಲ್ಲ. ಈಚೆಗೆ ಪಾಠಕರಿಗನುಕೂಲಿಸುವಂತೆ ಹೆಚ್ಚು ವಿಷಯಗಳನ್ನೂ ಪದ್ಯಗಳನ್ನೂ ಸೇರಿಸಿ, ಈ ನಾಟಕವನ್ನು, ನಾನು ಪ್ರಕಟಿಸುತ್ತಿರುವ "ಸುಧಾಕರ ಕರ್ಣಾಟಕ ಗ್ರಂಥಾವಳಿ" ಯಲ್ಲಿ ಐದನೆಯ ಗ್ರಂಥವನ್ನಾಗಿ ಈಗ ಪ್ರಥಮತಃ ಮುದ್ರಿಸಿರುವೆನು. ಇದನ್ನೋದುವ ಗುಣಜ್ಞರಾದ ಕನ್ನಡಿಗರಿಗೆ ಅಲ್ಪ ಸ್ವಲ್ಪ ಸಂತೋಷವುಂಟಾದರೂ, ನನ್ನ ಕರ್ಣಾಟಕಮಾತೆಯ ಸೇವೆಯ ಉದ್ದೇಶವು ಸಫಲವಾಯಿತೆಂದು ಸಂತೋಷಿಸಿ, ಗುಣಪಕ್ಷಪಾತಿಗಳಾದ ಅವರಿಗೆ ನನ್ನ ವಂದನೆಗಳನ್ನರ್ಪಿಸುವೆನು.

ಕುಶಲಕಲಾಭಿಮಾನಿಗಳಾಗಿ, ನನಗೆ ನಾಟಕಲೇಖನದಲ್ಲಿ ವಿಶೇಷ ಪ್ರೋತ್ಸಾಹ ಸಹಾಯಗಳನ್ನು ಮಾಡಿ ಗೌರವಿಸಿರುವ ಮ|| ರಾ|| ಶ್ರೀ|| ವಿನೋದರತ್ನಾಕರ ಜಿ. ಹೆಚ. ವೀರಣ್ಣನವರಿಗೆ ನಾನು ಚಿರಕೃತಜ್ಞನಾಗಿ ಅವರ ಶ್ರೇಯೋಭಿವೃದ್ಧಿಯನ್ನು ಬಯಸುತ್ತಿರುವೆನು.

ಅಲ್ಲದೆ, ನನ್ನ ಗ್ರಂಥವನ್ನು ಬಹುಮಾನಿಸಿ ನನಗೆ ಉತ್ತೇಜನವನ್ನು ಕೊಟ್ಟ ಬೆಂಗಳೂರು ಅಮೆಚೂರ್ ನಾಟಕ ಸಂಘದವರಿಗೂ ಸಹ ನನ್ನ ವಿನಯಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು.

ಈ ನಾಟಕವನ್ನೂ, ಇದರ ಹಿಂದೆ ಮುದ್ರಿತವಾಗಿರುವ ಶ್ರೀ ಕೃಷ್ಣಗಾರುಡಿ ಮತ್ತು ಶ್ರೀ ಕೃಷ್ಣಪಾರಿಜಾತ ನಾಟಕಗಳನ್ನೂ, ಸಕಾಲದಲ್ಲಿ ಅಂದವಾಗಿ ನನ್ನಿಷ್ಟದಂತೆ ಮುದ್ರಿಸಿಕೊಟ್ಟ ಬೆಂಗಳೂರು ಮೋದಿ ಪವರ್ ಪ್ರೆಸ್ಸಿನವರು ನನ್ನ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

| ಶ್ರೀಮುಖ ಸಂ|| ಜ್ಯೇಷ್ಠ ಶು|| ೧ ಗುರುವಾರ<br>೨೫-೫-೧೯೩೩ ಬೆಂಗಳೂರು ನಗರ. | ಬೆಳ್ಳಾವೆ ನರಹರಿಶಾಸ್ತ್ರಿ. |
|---|---|

# ಪಾತ್ರಗಳು

—:0:—

| ಪುರುಷರು | ಸ್ತ್ರೀಯರು |
|---|---|
| ಶ್ರೀಕೃಷ್ಣ | ರುಕ್ಮಿಣಿ—ವಿದರ್ಭರಾಜಪುತ್ರಿ |
| ಬಲರಾಮ | ಮದಿರಾಂಗನೆ—ಮದ್ಯಾಭಿಮಾನದೇವತೆ |
| ಮಕರಂದ—(ಶ್ರೀಕೃಷ್ಣನ ಸ್ನೇಹಿತ) | ಲಕ್ಷ್ಮೀದೇವಿ |
| ನಾರದ | ರಾಧೆ |
| ಪರಶುರಾಮ | ಸರಸವಾಣಿ—ರುಕ್ಮಿಣಿಯ ಸಖಿ |
| ಜರಾಸಂಧ—ಮಗಧರಾಜ್ಯದ ದೊರೆ | ಮುಕ್ತಾವಳಿ— ,, |
| ಶಿಶುಪಾಲ—ಚೇದಿರಾಜ್ಯದ ದೊರೆ | |
| ಸಾಲ್ವ—ಜರಾಸಂಧನ ಸಾಮಂತರಾಜ | |
| ಭೀಷ್ಮಕ—ವಿದರ್ಭರಾಜ್ಯದ ದೊರೆ | ಮಾದವ್ವ—ಕೊರವಂಜಿಯವೇಷದ ಶ್ರೀಕೃಷ್ಣ |
| ರುಕ್ಮಿ—ಭೀಷ್ಮಕರಾಜನ ಪುತ್ರ | |
| ವಿರೂಪಾಕ್ಷ—ಜರಾಸಂಧನ ಮಂತ್ರಿ | ಮಕರವ್ವ—ಕೊರವಂಜಿಯವೇಷದ ಮಕರಂದ |
| ಮಕರಾಕ್ಷ— ,, | |

ವೈತಾಳಿಕರು, ಮಂತ್ರಿಗಳು, ಚೇಟಿಯರು, ಬ್ರಾಹ್ಮಣರು, ಸುವಾಸಿನಿಯರು, ದುರ್ಯೋಧನ ಕರ್ಣಾದಿ ರಾಜರುಗಳು, ಸೈನಿಕರು ಮೊದಲಾದವರು.

---

ಸೂಚನೆ :—ಮುಂದಿನ ಪುಟಗಳಲ್ಲಿ ಪಾತ್ರಗಳ ಹಿಂದೆ, ಮುಂದೆ, ಅಲ್ಲಲ್ಲಿ ಹಾಕಿರುವ ಸಂಖ್ಯೆಗಳು, ಪುಸ್ತಕದ ಕಡೆಯಲ್ಲಿ ಕೊಟ್ಟಿರುವ ಅನುಬಂಧದ ಆಯಾ ಸಂಖ್ಯೆಯ ಹಾಡುಗಳನ್ನು ಉಪಯೋಗಿಸಿಕೊಳ್ಳತಕ್ಕ ಸ್ಥಳಗಳನ್ನು ಸೂಚಿಸುವುವು.

ಶ್ರೀ

# ರುಕ್ಮಿಣೀಸ್ವಯಂವರ

## ನಾಂದಿ

ಶಾ|| ಶ್ರೀ ವಿದ್ಯಾವಿಭವಾಭಿರಾಮ ಲಲಿತ ಶ್ರೀ ಸತ್ಕಳಾ ಮೂರ್ತಿಯಂ |
ಲಾವಣ್ಯಾಂಬುಧಿ ದಿವ್ಯಚಂದ್ರಕಳೆಯಂ ವೈದರ್ಭಿಯಂ ಲೀಲೆವೆ ||
ತ್ತಾವಂ ಸಾಧಿಸಿದಂ ಪ್ರಭಾವಬಲದಿಂವಾಲೋಕ ಸಂಸ್ತುತ್ಯ ರಾ |
ಜೀವಾಕ್ಷಂ ಶುಭಮೀಗೆ ನಮ್ಮೊಳನಿಶಂ ಶ್ರೀರುಕ್ಮಿಣೀ ವಲ್ಲಭಂ || ೧ ||

೧

---

# ಪ್ರಥಮಾಂಕಂ

## ದೃಶ್ಯ ೧.—ಮಗಧರಾಜಧಾನಿಯ ಉಪವನ ಪ್ರಾಂತ್ಯ

**ನಾರದ**—ಶ್ರೀ ಪರಮಾತ್ಮನ ಮಹಿಮೆಯು ಅದ್ಭುತವಾದುದು. ಲೋಕದಲ್ಲಿ ಧರ್ಮಗ್ಲಾನಿಯುಂಟಾದಾಗಲೆಲ್ಲವೂ ಧರ್ಮಸ್ವರೂಪನಾದ ಆತನು ಅವತರಿಸಿ ದುಷ್ಟನಿಗ್ರಹ ಶಿಷ್ಟಪರಿಪಾಲನೆಯಿಂದ ಧರ್ಮೋದ್ಧಾರ ಮಾಡುತ್ತಲೇ ಇರುವನು. ಹೀಗೆ ಆತನು ಶ್ರೀಕೃಷ್ಣಾವತಾರದಿಂದ ಉದಿಸಿ, ಧರ್ಮಕಂಟಕನಾಗಿದ್ದ ಕಂಸನನ್ನು ವಧಿಸಿ, ಲೋಕಾನಂದ ವನ್ನುಂಟುಮಾಡಿದುದಾಯಿತು. ಆದರೂ, ಇನ್ನೂ ಆ ಕಂಸನಂತೆಯೇ ಅವನ ಮಾವನಾದ ಜರಾಸಂಧನೂ, ಅವನ ಅನುಯಾಯಿಗಳಾದ ಶಿಶುಪಾಲ ರುಕ್ಮಿ ಸಾಲ್ವಾದಿಗಳೂ ಸಹ ಧರ್ಮಘಾತುಕರಾಗಿ ಮೆರೆಯು ತ್ತಿರುವರು. ಅಧರ್ಮವು ಪ್ರಬಲವಾದೆಡೆಗಳಲ್ಲಿ, ಧರ್ಮಘಾತುಕರನ್ನು ನಿಗ್ರಹಿಸಲು ತಕ್ಕಂತೆ, ಧರ್ಮಪರಿಣಾಮವೂ ಲೋಕಕಲ್ಯಾಣವೂ ಆಗು ವಂತಹ ಸಮಯೋಚಿತ ಸಂಧಿಸಂವಿಧಾನಗಳನ್ನು ಕಲ್ಪಿಸುತ್ತಿರುವ ನನಗೆ, ಆ ಜರಾಸಂಧ ಶಿಶುಪಾಲಾದಿಗಳ ಮದವನ್ನಿಳಿಸಲು ಈಗ ತಕ್ಕ

ಸಮಯವು ದೊರೆತಿರುವುದು. ಆದುದರಿಂದ ನಾನೀಗಲೇ ಜರಾಸಂಧನ ಬಳಿಗೆ ಹೋಗಿ, ಕೃಷ್ಣನಿಂದ ಅವನ ಅಳಿಯನಾದ ಕಂಸನು ಹತನಾದ ವಾರ್ತೆಯನ್ನು ಉಚಿತರೀತಿಯಿಂದ ತಿಳಿಸಿ, ಅವನನ್ನು ಕೆರಳಿಸಿ, ಅವನು ರುಕ್ಮಿ ಶಿಶುಪಾಲ ಸಾಲ್ವಾದಿಗಳೊಡನೆ ಮಥುರಾನಗರದ ಮೇಲೆ ದಂಡೆತ್ತಿ ಹೋಗುವಂತೆ ಮಾಡುವೆನು. (ಹೋಗುವನು.)

## ದೃಶ್ಯ ೨.—ಮಗಧರಾಜಧಾನಿಯಲ್ಲಿ ಜರಾಸಂಧನ ಸಭಾಸ್ಥಾನ

(ಜರಾಸಂಧನು, ಮಕರಾಕ್ಷ ವಿರೂಪಾಕ್ಷಾದಿ ಸಚಿವ ಸಾಮಾಜಿಕರಿಂದ ಪರಿವೃತನಾಗಿ ಸಿಂಹಾಸನದಲ್ಲಿ ಮಂಡಿಸಿರುವನು.)

**ವೈತಾಳಿಕರು**—ಜಯ ಜಯ ಜಗದ್ವಿಖ್ಯಾತ ಮಹಾವೈಭವಾನಂದ, ನಿಜನಾಮ ಪ್ರಕಂಪಿತ ಸಕಲ ಸುರಾಸುರಬೃಂದ, ನಿಕೃತ್ತ ನಿಖಿಲ ವೈರಿಸ್ಕಂಧ, ಶ್ರೀಜರಾಸಂಧರಾಜೇಂದ್ರ ಜಯಪರಾಕು ! ಜಯಪರಾಕು!

**ಜರಾಸಂಧ**— ||ವೃತ್ತ||

ತ್ರಿಜಗತ್ಕಂಪನ ದೋರ್ಬಲ ಪ್ರಚಕಿತಾಮರ್ತ್ಯ ಪ್ರತಾನಂ ಮಹಾ |
ಧ್ವಜಿನೀ ಶೌರ್ಯಸಮಾರ್ಜಿತಾಮಳ ಯಶೋವಿಭ್ರಾಜಿತಾಶಾತಟಂ ||
ನಿಜಧೈರ್ಯಾದ್ಭುತ ಶೌರ್ಯನಿಸ್ತುಲಸುಖೈಶ್ವರ್ಯಾತಿಗಾಂಭೀರ್ಯನೀ |
ವಿಜಯ ಪ್ರಸ್ತುತನಾದ ದುರ್ಜಯ ಜರಾಸಂಧಂಗದಾರ್ ಸಾಟಿಯೋ ! ||

ಅಮಾತ್ಯವರ್ಯರಾದ ಮಕರಾಕ್ಷ ವಿರೂಪಾಕ್ಷಾದಿಗಳೇ, ಸಕಲರಾಜ ತಂತ್ರವಿಶಾರದರೂ, ಸಮರಕಲಾಕೋವಿದರೂ ಆದ ನಿಮ್ಮ ಸಹಾಯ ದಿಂದ ಎಲ್ಲೆಲ್ಲಿಯೂ ನಮ್ಮ ಆಧಿಪತ್ಯವೇ ಪ್ರಬಲವಾಗುತ್ತಿರುವುದು. ಚೇದಿರಾಜ್ಯವನ್ನು ನಮ್ಮ ಪರಮಮಿತ್ರನೂ ಶೌರ್ಯವಿಶಾಲನೂ ಆದ ಶಿಶುಪಾಲಭೂಪಾಲನು ಪಾಲಿಸುತ್ತಿರುವನು; ಕರವೀರ ರಾಜ್ಯವನ್ನು ಅರಿಕುಲಕಾಲನಾದ ಸೃಗಾಲ ಕ್ಷಿತಿಪಾಲನಾಳುತ್ತಿರುವನು. ವಿದರ್ಭ ರಾಜ್ಯದಲ್ಲಿ ಭೀಷ್ಮಕರಾಜನು ನೆಪಮಾತ್ರಕ್ಕೆ ರಾಜನಾಗಿರುವನಲ್ಲದೆ ಅಲ್ಲಿಯ ರಾಜಕಾರ್ಯಗಳೆಲ್ಲವೂ ನಮ್ಮ ಪರಮಮಿತ್ರನಾದ ರುಕ್ಮಿಕುಮಾರ ನಿಂದಲೇ ನಡೆಯುತ್ತಿರುವುವು. ಇನ್ನು ಆ ಮಥುರಾನಗರವಾದರೋ ನಮ್ಮ ಅಳಿಯನಾದ ತ್ರಿಭುವನಪ್ರಶಂಸನೆನಿಸಿದ ಕಂಸಭೂಪಾಲನಿಂದ

ಪರಿರಕ್ಷಿತವಾಗಿರುವುದು. ಹೀಗೆ ಪ್ರಬಲಪರಾಕ್ರಮಿಗಳಾದ ರಾಜರನೇಕರು ನಮಗೆ ವಿಧೇಯರೂ ವಿಶ್ವಾಸಪಾತ್ರರೂ ಆಗಿದ್ದರೂ, ಇನ್ನೂ ಅನೇಕಮಂದಿ ಮಾನವಭೂಪತಿಗಳು ತಾವು ಸ್ವತಂತ್ರರೆಂದು ಹಿಗ್ಗಿ ಗರ್ವಾಂಧರಾಗಿ ನಮ್ಮನ್ನು ಲಕ್ಷಿಸದೆ ಬೀಗುತ್ತಿರುವರು. ಆದುದರಿಂದ ಆ ಮದಾಂಧ ಭೂಪಾಲರನ್ನು ಧುರದಲ್ಲಿ ಸದೆಬಡಿದು ಏಕಚ್ಛತ್ರಾಧಿಪತ್ಯದಿಂದ ಈ ಭೂಮಂಡಲವನ್ನಾಳಬೇಕೆಂಬ ಕುತೂಹಲವು ನಮಗುಂಟಾಗಿರುವುದು. ಈ ಕಾರ್ಯವನ್ನು ಕೈಕೊಂಡು ವಿಜಯಪ್ರಯಾಣವನ್ನು ಹೊರಡುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?

**ಮಕರಾಕ್ಷ**—ರಾಜೇಂದ್ರಾ ! ಗಜದ ಮುಂದೆ ಅಜಗಳೇ ! ಹರಿಯಮುಂದೆ ನರಿಗಳೇ ! ಈ ದಾನವೇಂದ್ರನ ಮುಂದೆ ಆ ಮಾನವೇಂದ್ರರೇ ! ಈ ಪ್ರಬಲ ಪ್ರತಾಪಶಾಲಿಗಳಾದ ಸ್ವಾಮಿಯವರ ಮುಂದೆ ಪ್ರತಿಭಟಿಸಿ ನಿಲ್ಲಬಲ್ಲ ವೀರರು ದೇವದಾನವ ಮಾನವರಲ್ಲಿ ಯಾರು ತಾನೇ ಇರುವರು ! ಈ ವಿಜಯಪ್ರಸ್ಥಾನವನ್ನು ಕೈಕೊಳ್ಳುವ ವಿಷಯದಲ್ಲಿ ಸಂದೇಹವೇಕೆ ? ಮಹಾಪ್ರಭುಗಳ ಅಭ್ಯುದಯವೇ ನಮ್ಮ ಭಾಗ್ಯವು. ಈ ಪ್ರಯತ್ನಕ್ಕೆ ನಮ್ಮೆಲ್ಲರ ಸಮ್ಮತಿಯೂ ಉಂಟು.

**ವಿರೂಪಾಕ್ಷಾದಿಗಳು**— ಓಹೋ ! ನಿಸ್ಸಂದೇಹವಾಗಿ ಉಂಟು. ಹಾಗೆ ಮಾಡುವುದೇ ಉಚಿತವು.

**ನಾರದ**—(ಪ್ರವೇಶಿಸುವನು.) *

**ಜರಾಸಂಧ**—(ಎದ್ದು ವಂದಿಸಿ) ದೇವಮುನೀಂದ್ರರಿಗೆ ವಂದಿಸುವೆನು. ಈ ಪೀಠವನ್ನಲಂಕರಿಸಬೇಕು.

**ನಾರದ**—ಶ್ರೇಯೋಸ್ತು. (**ಕುಳಿತುಕೊಳ್ಳುವನು.**)

**ಜರಾಸಂಧ—ಕಂ**|| ಭವದಾಗಮದಿಂದತಿಮೋ |
ದವನಾಂತೆಂ ಮನದೆ ಮೌನಿ ವಂಶಲಲಾಮಾ ||
ಭುವನತ್ರಯಮಂ ಸಂಚರಿ |
ಸುವ ತಮ್ಮಾಗಮನಮಾದುದಾವೆಡೆಯಿಂದಂ ? ||೩||

ಪಾವನರಾದ ತಮ್ಮ ಪಾದ ರಜದಿಂದ ನನ್ನ ಭವನವು ಪವಿತ್ರವಾಯಿತು. ತಾವು ಎಲ್ಲಿಂದ ದಯಮಾಡಿಸಿದಿರಿ ?

**ನಾರದ**—ಜರಾಸಂಧರಾಜೇಂದ್ರಾ, ನಾನು ಮಥುರಾನಗರದಿಂದ ಬಂದೆನು.

**ಜರಾಸಂಧ**—ಓಹೋ! ಹಾಗಾದರೆ ನನ್ನ ಪುತ್ರಿಯರಾದ ಅಸ್ತಿಪ್ರಾಪ್ತಿಯರನ್ನೂ ಅಳಿಯನಾದ ಕಂಸಭೂಪಾಲನನ್ನೂ ನೋಡಿದ್ದಿರಾ?

**ನಾರದ**—ನೋಡಿದ್ದೆನು.

**ಜರಾಸಂಧ**—ಅವರು ಸುಖದಿಂದಿರುವರಷ್ಟೆ?

**ನಾರದ**—ಕಂಸರಾಜೇಂದ್ರನು ಸ್ವರ್ಗಸುಖವನ್ನನುಭವಿಸುತ್ತಿರುವನು.

**ಜರಾಸಂಧ**—ಆಹಾ! ನಿಜ. ಅವನು ಮಹಾ ವಿಭವಶಾಲಿ, ಮತ್ತು ಪರಮ ಸುಖಿ; ಅವನ ಅರಮನೆಯೂ ಸ್ವರ್ಗಪ್ರಾಯವಾಗಿಯೇ ಇರುವುದು.

**ನಾರದ**—ರಾಜೇಂದ್ರಾ! ಕಂಸಭೂಪಾಲನು ಸ್ವರ್ಗಕ್ಕೇ ಪ್ರಯಾಣ ಮಾಡಿದನು. ಅದನ್ನು ನೀನು ಕೇಳಲಿಲ್ಲವೇ?

**ಜರಾಸಂಧ**—ಇಲ್ಲ, ಕೇಳಲಿಲ್ಲ; ಹಾಗಾದರೆ ಕಂಸರಾಜನು ಸ್ವರ್ಗಕ್ಕೆ ಪ್ರಯಾಣಮಾಡಿದನೇ? (ಆತ್ಮಗತ) ಭಲಾ! ಅವನು ಯಾವಾಗಲೂ ಇಂತಹ ಅದ್ಭುತ ವಿಜಯ ಯಾತ್ರೆಗಳನ್ನೇ ಹೂಡುವನು. ಪರಾಕ್ರಮಿಯೆಂಬ ಹೆಸರು ಅವನಿಗೇ ಸಲ್ಲುವುದು. (ಪ್ರಕಾಶ) ಸ್ವಾಮೀ, ತನಗೆ ಪ್ರಬಲ ಶತ್ರುವೆನಿಸಿರುವ ಆ ಕೃಷ್ಣನನ್ನು ಮೊದಲು ಧ್ವಂಸಮಾಡುವ ಪ್ರಯತ್ನವನ್ನು ಬಿಟ್ಟು ಕಂಸನು ಈಗ ಸ್ವರ್ಗಕ್ಕೆ ಏತಕ್ಕೆ ಹೋದನು?

**ನಾರದ**—ಅದೇ ಆತನ ಮುಖ್ಯ ಪ್ರಯತ್ನವು. ಆ ಪ್ರಯತ್ನವನ್ನು ಮಾಡಿ ತನ್ನ ಕಾರ್ಯವನ್ನು ಪೂರಯಿಸಿಕೊಂಡೇ ಆತನು ಸ್ವರ್ಗಕ್ಕೆ ಹೋದುದು.

**ಜರಾಸಂಧ**—ಓಹೋ! ಹಾಗೆಯೇನು? ಹಾಗಾದರೆ ಆ ಕೃಷ್ಣನನ್ನು ವಧಿಸಲು ಕಂಸರಾಜನು ಯಾವ ಸಂಧಾನಮಾಡಿದನು?

**ನಾರದ**—ಧನುರ್ಮಹವೆಂಬ ಉತ್ಸವವ್ಯಾಜವನ್ನು ಕಲ್ಪಿಸಿ, ನಂದವ್ರಜದಿಂದ ಕೃಷ್ಣ ಬಲರಾಮರನ್ನು ಮಥುರೆಗೆ ಬರಮಾಡಿ, ಕುವಲಯಾಪೀಡವೆಂಬ ಆನೆಯಿಂದ ಅವರಿಬ್ಬರನ್ನೂ ತುಳಿಸಿಬಿಡಲು ಏರ್ಪಡಿಸಿದನು.

**ಜರಾಸಂಧ**—ಸರಿ, ಅಲ್ಲಿಗೆ ಅವರ ಕಥೆಯೇ ಪೂರಯಿಸಿರಬೇಕು. ಆಮೇಲೆ?

**ನಾರದ**—ಅವರ ಕಥೆಯು ಪೂರಯಿಸಲಿಲ್ಲ. ಅದರ ಕಥೆಯು ಪೂರಯಿಸಿತು.

**ಜರಾಸಂಧ**—(ಆಶ್ಚರ್ಯದಿಂದ) ಹಾಗೆಂದರೆ ?

**ನಾರದ**—ಎಂದರೆ, ಆ ಕೃಷ್ಣ ಬಲರಾಮರೇ ಆ ಆನೆಯನ್ನು ವಧಿಸಿಬಿಟ್ಟರು.

**ಜರಾಸಂಧ**—(ಆಶ್ಚರ್ಯದಿಂದ) ಏನು ಏನು ? ಆ ಅಲ್ಪಬಾಲಕರು ಆ ಮಹಾಗಜವನ್ನು ಸಂಹರಿಸಿದರೇ ?

**ನಾರದ**—ಅಹುದು. ಆದರೂ ಕಂಸನೇನು ಸುಮ್ಮನಿರಲಿಲ್ಲ. ಅದ್ಭುತ ಪರಾಕ್ರಮಿಗಳಾದ ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನು, ಆ ಬಾಲಕರ ಮೇಲೆ ನುಗ್ಗಿ ಮಲ್ಲಯುದ್ಧಮಾಡಿ ಅವರನ್ನು ಕೊಲ್ಲುವಂತೆ ಬಿಟ್ಟನು.

**ಜರಾಸಂಧ**—ಆಹಾ ! ಒಳ್ಳೆಯ ಕೆಲಸಮಾಡಿದನು ! ಸರಿ ! ಹಾಗಾದರೆ ಅವರಿಬ್ಬರೂ ಧ್ವಂಸವಾಗಿಯೇ ಇರಬೇಕು !

**ನಾರದ**—ಧ್ವಂಸವೋ ! ರಕ್ತವನ್ನು ಕಾರಿ ಪ್ರಾಣವನ್ನು ಬಿಟ್ಟುದಲ್ಲದೆ ಮಲ್ಲಯುದ್ಧದಲ್ಲಿ ಮೂಳೆಗಳೂ ಸಹ ಪುಡಿಪುಡಿಯಾಗಿ ಬಿದ್ದರು.

**ಜರಾಸಂಧ**—ಸರಿ! ಸರಿ! ಮುಷ್ಟಿಗೆ ಸಾಲದ ಮೂಢ ಬಾಲಕರು ಮುಷ್ಟಿಕ ಚಾಣೂರರಿಂದ ಹತರಾದುದೇನಾಶ್ಚರ್ಯ ! ಬಹಳ ಸಂತೋಷ ವಾಯಿತು ! ಶತ್ರುನಿವಾರಣೆಯಾಯಿತು !

**ನಾರದ**—ಜರಾಸಂಧರಾಜೇಂದ್ರಾ, ಹತರಾದವರು ಯಾರೆಂದರಿತೆ ?

**ಜರಾಸಂಧ**—ಮತ್ತೆ ಯಾರು ? ಕೃಷ್ಣ ಬಲರಾಮರು ತಾನೇ ?

**ನಾರದ**—ಅಲ್ಲ. ಕೃಷ್ಣ ಬಲರಾಮರಲ್ಲ, ಚಾಣೂರಮುಷ್ಟಿಕರು !

**ಜರಾಸಂಧ**—ಏನು ! ಏನು ! ಚಾಣೂರಮುಷ್ಟಿಕರೇ ಹತರಾದವರು ? ವಿನೋದಕ್ಕಾಗಿ ಹೇಳುವಿರೋ ಹೇಗೆ ?

**ನಾರದ**—ರಾಜೇಂದ್ರಾ ! ಇದು ವಿನೋದವಲ್ಲ. ಇದೆಲ್ಲವನ್ನೂ ನಾನು ಕಣ್ಣಿಂದ ನೋಡಿಕೊಂಡೇ ಬಂದೆನು.

**ಜರಾಸಂಧ**—ಚೆನ್ನಾಯಿತು. ಹಾಗಾದರೆ ಕಂಸನು ತಾನೇ ಆ ಬಾಲಕರನ್ನು ಹಿಡಿದು ವಧಿಸಿಬಿಟ್ಟನೇನು ?

**ನಾರದ**—ಕೇಳು ; ಉಪ್ಪರಿಗೆಯ ಮೇಲೆ ಕುಳಿತು ವಿನೋದವನ್ನು ನೋಡು ತ್ತಿದ್ದ ಕಂಸನು, ಚಾಣೂರ ಮುಷ್ಟಿಕರು ಹತರಾದುದನ್ನು ನೋಡಿ ಮಹಾರೋಷಾವೇಶದಿಂದ ಕಣ್ಣುಗಳಿಂದ ಕಿಡಿಗಳನ್ನುಗುಳುತ್ತ ಸಿಂಹಾ ಭರ್ಟದಿಂದ ಕೆಳಕ್ಕೆ ಧುಮ್ಮಿಕ್ಕಿ, ಕೃಷ್ಣನನ್ನು ಹಿಡಿದು ಗಿರಗಿರನೆ ತಿರು ಗಿಸಿ ಮಲ್ಲಯುದ್ಧಮಾಡಿ ನೆಲಕ್ಕೆ ಅಪ್ಪಳಿಸಲು, ಕೃಷ್ಣನು ಮತ್ತೆ ಚೇತ ರಿಸಿಕೊಂಡೆದ್ದು ಕಂಸನೊಡನೆ ಹೋರಾಡಿದನು. ಹೀಗೆ ಸ್ವಲ್ಪಹೊತ್ತು ಹೋರಾಡಿದನಂತರ ಕಂಸನ ಕಾರ್ಯವು ಪೂರ್ತಿಯಾಯಿತು.

**ಜರಾಸಂಧ**—(ಆಲೋಚಿಸಿ) ಓಹೋ ! ಆ ರೋಷಾವೇಶದಲ್ಲಿಯೇ, ಆ ಕೃಷ್ಣನ ಪಕ್ಷದವನಾದ ದೇವೇಂದ್ರನನ್ನೂ ಸದೆಬಡಿಯಲು ಸ್ವರ್ಗಕ್ಕೆ ಹೊರಟಿರಬೇಕು. ಹಠವಾದಿಯೆಂದರೆ ಅವನೇ ! ಅವನೇ !

**ನಾರದ**—(ಆತ್ಮ) ನಾನು ಇಷ್ಟುಬಗೆಯಾಗಿ ಹೇಳಿದರೂ ಈ ಅವಿವೇಕಿಯು ಅರ್ಥಮಾಡಿಕೊಳ್ಳದೆ ಹುಚ್ಚುಹುಚ್ಚಾಗಿ ಆನಂದಪಡುತ್ತಿರುವನು. ಮದಾಂಧರಾದ ಈ ದೈತ್ಯರ ಸ್ವಭಾವವೇ ಇದು. ಯಾವ ಮಾತಿಗೂ ತಮ್ಮ ಪೌರುಷ ಪ್ರಶಂಸೆಗೆ ತಕ್ಕಂತೆ ಅರ್ಥಗಳನ್ನು ಕಲ್ಪಿಸಿಕೊಂಡು ನಲಿದು ನಕ್ಕು ಹಿಗ್ಗಿ ಭಗ್ನರಾಗುವರು. ಕಂಸನು ಮೃತನಾದನೆಂಬ ಭಾವವೇ ಇವನ ಮನಸ್ಸಿಗೆ ಬರಲಿಲ್ಲ.

**ಚಾರ**—ದಾನವೇಂದ್ರನಿಗೆ ಜಯವಾಗಲಿ. ಮಥುರಾನಗರದಿಂದ ರಾಜ ಪುತ್ರಿಯರು ದಯಮಾಡಿಸಿರುವರು.

**ಜರಾಸಂಧ**—ಏನು ? ನಮ್ಮ ಅಸ್ತಿ ಪ್ರಾಪ್ತಿಯರೇ ? ಬಹಳ ಸಂತೋಷ. ಕಂಸಭೂಪಾಲನೂ ಬಂದಿದ್ದರೆ ಚೆನ್ನಾಗಿತ್ತು.

**ನಾರದ**—ಸ್ವರ್ಗಕ್ಕೆ ಹೋದವನು ಇಲ್ಲಿಗೆ ಹೇಗೆ ಬರುವನು ?

**ಜರಾಸಂಧ**—ನಿಜ ! ನಿಜ ! ಅಲ್ಲದೆ ಅಪರಿಮಿತ ರಾಜಕಾರ್ಯಮಗ್ನನಾದ ಕಂಸನು ಬರಲು ಅವನಿಗೆ ವಿರಾಮವು ತಾನೆ ಎಲ್ಲಿಯದು ! ಅಸ್ತಿಪ್ರಾಪ್ತಿ ಯರು ನನ್ನನ್ನು ನೋಡಿ ಬಹು ದಿನಗಳಾದುದರಿಂದ ಈಗ ಬಂದಿರ ಬೇಕು. ಮಂತ್ರಿವರ್ಯಾ ! ನಾನೀಗಲೇ ಬಂದು ಅವರನ್ನಭಿನಂದಿಸುವೆ ನೆಂದು ತಿಳಿಸುವಂತೆ ಹೇಳು.

**ಚಾರ**—ಮಹಾಪ್ರಭೂ ! ಅವರು ದುಃಖಿಸುತ್ತ ಇತ್ತಲೇ ಬರುತ್ತಿರುವರು.

**ಜರಾಸಂಧ**—ಇವನೆಂತಹ ಅಸಂಬದ್ಧ ಪ್ರಲಾಪಿಯು ! ದುಃಖಿಸುತ್ತ ಬರುತ್ತಿರುವರಂತೆ ! ಈ ಜರಾಸಂಧನ ಪುತ್ರಿಯರಾಗಿ, ಕಂಸಭೂಪಾಲನ ಪತ್ನಿಯರಾಗಿ, ಅವರಿಗೆ ದುಃಖವೆಂದರೇನು ? ಅವಿವೇಕಿ ! ಅವಿವೇಕಿ !!

**ನಾರದ**—(ನೋಡಿ) ದಾನವೇಂದ್ರಾ ! ಅವರು ಕಣ್ಣೀರು ಸುರಿಸುತ್ತಲೇ ಬರುತ್ತಿರಬೇಕು, ನೋಡು.

**ಜರಾಸಂಧ**—ನೋಡುವುದೇನು ಪೂಜ್ಯರೇ? ಅಸ್ತಿಪ್ರಾಪ್ತಿಯರು ಬಹಳ ದಿನಗಳಿಂದ ನನ್ನನ್ನು ನೋಡದಿದ್ದಕಾರಣ ಈದಿನ ಕುತೂಹಲಭರಿತರಾಗಿ ನನ್ನನ್ನು ನೋಡುವಾತುರದಿಂದ ಆನಂದಬಾಷ್ಪಧಾರಾಲೋಚನೆಯರಾಗಿ ಬರುತ್ತಿರಬಹುದು. ಈ ಅವಿವೇಕಿಯು, ಅವರು ದುಃಖಿಸುತ್ತಿರುವರೆಂದು ತನ್ನ ಪಾಮರಬುದ್ಧಿಗೆ ತಕ್ಕಂತೆ ಹರಟುತ್ತಿರುವನು.

**ನಾರದ**—(ಆತ್ಮ) ಲೋಕದಲ್ಲಿ ಇಂತಹ ಅವಿವೇಕಿಗಳೂ ಉಂಟೇ ? ಇನ್ನು ಎಂತಹ ಅಂಧತ್ವ ! ಎಂತಹ ಅಜ್ಞಾನ ! ನಿಜಾಂಶವೇನೆಂಬುದನ್ನು ವಿಚಾರಿಸದೆ ಹೀಗೆ ಆನಂದಪಡುತ್ತಿರುವನಲ್ಲಾ ! ಇರಲಿ. ಸಂತೋಷವು ಹತ್ತಲಿ. ಹತ್ತಿದಷ್ಟೂ ಪಾತಾಳಕ್ಕೆ ಬಿದ್ದು ರೋಷವುಕ್ಕಲು ಅನುಕೂಲ. (ಪ್ರಕಾಶಂ) ರಾಜೇಂದ್ರಾ ! ಅವರು ದುಃಖಿಸುತ್ತಲೇ ಬರುತ್ತಿರಬೇಕು; ಪತಿಯು ಹತನಾದಮೇಲೆ ಅವರಿಗೆ ದುಃಖಬಾಷ್ಪಗಳಲ್ಲದೆ ಆನಂದ ಬಾಷ್ಪಗಳು ಹೇಗೆ ಬರುವುವು ?

**ಜರಾಸಂಧ**—(ಕಾತರದಿಂದ) ಏನು ? ಏನು ? ಕಂಸನು ಹತನಾದನೇ ? ಹತನಾದನೇ ಕಂಸನು ?

**ನಾರದ**—ಕೃಷ್ಣನಿಂದ ಹತನಾದನೆಂದು ನಾನು ಮೊದಲೇ ಹೇಳಲಿಲ್ಲವೇ ?

**ಜರಾಸಂಧ**—ನಾರದರೇ ! ಕಂಸನು ಹತನಾದನೆಂದು ನೀವು ಹೇಳಲೇ ಇಲ್ಲವಲ್ಲಾ !

**ನಾರದ**—ಸರಿ ! ಸತ್ತನೆಂದು ಕಠೋರವಾಗಿ ಉಚ್ಚರಿಸಲಾರದೆ ಸ್ವರ್ಗಕ್ಕೆ ಹೋದನೆಂದೆನು.

**ಜರಾಸಂಧ**—ಅಯ್ಯೋ! ನಿಮ್ಮ ಭಾವವು ನನಗರ್ಥವಾಗದೆ ನಾನಾ ವಿಧವಾಗಿ ಅವನ ಪರಾಕ್ರಮವನ್ನು ಹೊಗಳಿದೆನಲ್ಲಾ! (ವ್ಯಥೆಯಿಂದ) ಹಾ! ಕಂಸಾ! ಲೋಕಪ್ರಶಂಸಾ! ಈ ಲೋಕವನ್ನು ಬಿಟ್ಟೆಯಾ? ಅಯ್ಯೋ! ಸುಪುತ್ರಿಯರೇ! ಅಸಹಾಯಶೂರನೂ, ಅಸುರಕುಲ ಹೀರನೂ ಆಹವಧೀರನೂ ಆದ ಆ ಕಂಸಾಸುರನ ಕೈವಿಡಿದ ನಿಮಗೂ ವೈಧವ್ಯವು ಪ್ರಾಪ್ತವಾಯಿತೇ! ನಾನೀ ದುಃಖವನ್ನು ಹೇಗೆ ಸಹಿಸಲಿ! ಪರಾಕ್ರಮಿಯೂ ಅಳಿಯನೂ ಸ್ನೇಹಿತನೂ ಸಮರಸಹಾಯಕನೂ ಆಗಿದ್ದ ಆ ವೀರಾಗ್ರಣಿಯನ್ನು ಅಗಲಿದುದಕ್ಕಾಗಿ ದುಃಖಿಸಲೇ! ಅಪರಿಹಾರ್ಯವಾದ ಪುತ್ರಿಯರ ವೈಧವ್ಯಕ್ಕಾಗಿ ದುಃಖಿಸಲೇ! ಅಣುಮಾತ್ರದ ಮಾನವ ಬಾಲಕನಿಂದ ಅದ್ಭುತ ಸಾಹಸಿಯಾದ ಕಂಸನು ಹತನಾಗಿ ಈ ನಮ್ಮ ವೀರಪಕ್ಷಕ್ಕೇ ಬಂದ ಅಪಮಾನಕ್ಕಾಗಿ ದುಃಖಿಸಲೇ! ಹಾ! ವಿಧಿಯೇ! ಅಂತಹ ಪರಾಕ್ರಮಿಯು ಮೃತನಾದನೆಂದರೆ ನಂಬಿಕೆಯೇ ತೋರುವುದಿಲ್ಲವಲ್ಲಾ! ಅಯ್ಯೋ! ಕಡೆಗೂ ಅಶರೀರವಾಣಿಯು ಹೇಳಿದುದು ನಿಜವೇ ಆಯಿತು!

|| ಸೀಸಪದ್ಯ ||

ಅಪರಿಮಿತಬಲನಾಗಿ ರಿಪುದವಾನಲನೆಂಬ ವಿಪುಲ ಕೀರ್ತಿಯನಾಂಪ ಶಪಥಮೆಸಗಿ ||
ನಿರ್ಜರೋರಗ ಯಕ್ಷನಿಕರ ಭೀಕರನಾಗಿ ರಾಜಕುಲಪಾಥೋಧಿ ರತ್ನನೆನಿಸಿ ||
ಕಂಸನಾ ಲೋಕಪ್ರಶಂಸ ನೀಪರಿ ದುಷ್ಟ ಕಪಟಬಾಲಕನಿಂದೆ ವಪುವನಳಿಯೆ ||
ಘಟಿಸಿದಪಮಾನ ಸಂಕಟಗಳಂ ಸಹಿಸುತೀ ಬಾಲೆಯರ ನೋಡಿ ನಾಂ ಬಾಳಲೆಂತು ||೪||

ಗೀತೆ|| ತುಂಗ ವಿಭವಾಂಕ ರಾಜಾಂಗನೆಯರಿಂತು ||
ಮಾಂಗಲ್ಯ ಸೌಭಾಗ್ಯಭಂಗವನೆ ತಳೆದು ||
ಪೊಂಗುವಳಲಿಂ ಬಂದಪಾಂಗನಿದ ನೋಡಿ |
ಹಿಂಗದುರಿದಪುದಂತರಂಗ ಮೆನಗಿಂದು || ೫ ||

(ವ್ಯಥೆಯಿಂದ ಪೀಠದಮೇಲೆ ಬೀಳುವನು.)

**ನಾರದ**—(ಆತ್ಮ) ಇವನ ದುಃಖವು ಬಲವಾಯಿತು. ಈಗಲೀಗ ಮುಂದಿನ ದುಷ್ಟದಹನ ಕಾರ್ಯಕ್ಕೆ ಅಗ್ನಿ ಪ್ರತಿಷ್ಠಾಪನೆ ಮಾಡಲು ತಕ್ಕಸಮಯ. (ಜರಾಸಂಧನನ್ನು ನೋಡಿ) ಜರಾಸಂಧ ಭೂಪಾಲಾ! ಏಳು ಏಳು;

"ಗತಂ ನಶೋಚಯೇತ್ಪ್ರಾಜ್ಞಃ" ಎಂದು, ಕಳೆದುಹೋದ ಕಾರ್ಯಕ್ಕೆ ಪ್ರಾಜ್ಞನಾದವನು ದುಃಖಿಸಬಾರದು. ಮುಂದಿನ ಕಾರ್ಯಗಳನ್ನು ನೀನೀಗ ಗಮನಿಸದೆ ಇದ್ದಲ್ಲಿ ಈ ನಿಮ್ಮ ರಾಕ್ಷಸಕುಲಕ್ಕೇ ಹಾನಿ ಬಂದೀತು.

**ಜರಾಸಂಧ**—(ಎದ್ದು) ಏನು! ನಮ್ಮ ಕುಲಕ್ಕೇ ಹಾನಿಯೇ?

**ನಾರದ**—ಅಹುದು. ಆ ಕೃಷ್ಣಬಲರಾಮರು ಸಾಮಾನ್ಯರೆಂದೆಣಿಸಬೇಡ. ಕಂಸನು ನನ್ನ ಮಾತನ್ನು ಕೇಳದೆ ಉದಾಸೀನತೆಯಿಂದಿದ್ದುದರಿಂದಲೇ ಅವನಿಗೀಗತಿಯಾಯಿತು. ಆದುದರಿಂದ ನಾನೀಗ ನಿನಗೆ ಎಚ್ಚರಿಕೆಯನ್ನು ಕೊಡಲು ಬಂದೆನು. ನೀನು ಆ ಬಲರಾಮ ಕೃಷ್ಣರನ್ನು ಹಿಡಿದು ಶಿಕ್ಷಿಸುವುದಾದರೆ.... .... .... ....

**ಜರಾಸಂಧ**—ಏನು? ಏನು? ಶಿಕ್ಷಿಸುವುದಾದರೆ? ಅವರನ್ನು ಶಿಕ್ಷಿಸುವೆನೋ ಭಕ್ಷಿಸಿಯೇ ಬಿಡುವೆನೋ! ನೋಡುತ್ತಿರಿ.

ವೃ|| ಪಿಡಿವೆಂ ದುರ್ಮದ ರಾಮಕೃಷ್ಣಖಳರಂ ಕೈಕಾಲ್ಗಳಂ ಖಡ್ಗದಿಂ |
ಕಡಿವೆಂ ಯಾದವ ವಂಶಮಂ ಮದಮಿತಕ್ರೋಧಾಗ್ನಿಯಿಂದೀಗಳಾಂ ||
ಸುಡುವೆಂ ಸೂರೆಗೊಳುತ್ತುಮಾ ಮಥುರೆಯತ್ಯೈಶ್ವರ್ಯಮಂ ತೃಪ್ತಿಯಂ|
ಪಡೆವೆಂ ಶತ್ರುವನಾಮುವಂ ತೊಡೆವೆನಾಂ ಪ್ರಖ್ಯಾತಿಯಿಂ ಕೂಡುವೆಂ||೬

**ನಾರದ**—ಭಲಾ! ಜರಾಸಂಧಾ! ಇದೀಗ ಶಪಥವು! ಇದೀಗ ಸಾಹಸವು! ನೀನಲ್ಲವೇ ಪೌರುಷವಂತನು! ಇನ್ನು ನಿನ್ನ ಕಾರ್ಯವನ್ನು ತ್ವರೆಮಾಡು. ನೀನು ಬಲರಾಮ ಕೃಷ್ಣರನ್ನು ಧ್ವಂಸಮಾಡಲು ಪ್ರಯತ್ನಿಸಿದ ಹೊರತು ದುಷ್ಟರಿಗೆ ತಕ್ಕ ಶಿಕ್ಷೆಯಾಗಲಾರದು. ಆದುದರಿಂದ ಉದಾಸೀನಮಾಡದೆ ಮೊದಲು ಹೊರಡು. ವಿಳಂಬವೇ ವಿಷ.

**ಜರಾಸಂಧ**—ನಿಜ! ನಿಜ! ನಾನು ಬಲ್ಲೆನು. ತಾವು ನನಗೆ ಈ ಎಚ್ಚರಿಕೆಯನ್ನು ಕೊಟ್ಟುದಕ್ಕಾಗಿ ತಮಗೆ ಕೃತಜ್ಞನಾಗಿರುವೆನು. ಈಗಲೇ ಸೈನ್ಯಸಹಿತನಾಗಿ ಹೋಗಿ, ಆ ಭ್ರಷ್ಟರಾದ ಕೃಷ್ಣ ಬಲರಾಮರನ್ನು ಹಿಡಿದು, ತುಂಡುತುಂಡುಗಳಾಗಿ ಕಡಿದು, ಮಾರಿಮಸಣಿಗಳಿಗೌತಣವನ್ನುಮಾಡಿ, ನನ್ನ ಕ್ರೋಧವನ್ನು ತೀರಿಸಿಕೊಳ್ಳುವೆನು.

**ನಾರದ**—ಭಲಾ! ಹಾಗೆಯೇ ಮಾಡಲು ಪ್ರಯತ್ನಿಸು. ಮೊದಲು ಪ್ರಯತ್ನಿಸು. ಆದರೆ ಹುಡುಗರೂ, ಬಡಗೋಪಾಲಕರೂ ಎಂದು ಕೃಷ್ಣ ಬಲರಾಮರನ್ನು ಉದಾಸೀನ ಮಾಡಬೇಡ! ಏತಕ್ಕೆಂದರೆ, ಸ್ವಭಾವ ಪರಾಕ್ರಮಿಗಳಾದ ಅವರಿಗೆ ಕಂಸನು ಶೇಖರಿಸಿದ್ದ ಅಪರಿಮಿತ ಸೈನ್ಯವು ಸಹಾಯವಾಗಿರುವುದು. ಅಲ್ಲದೆ ಮಥುರಾನಗರದ ಪ್ರಜೆಗಳೆಲ್ಲರೂ ಕೃಷ್ಣ ಬಲರಾಮರಿಗಾಗಿ ತಮ್ಮ ಪ್ರಾಣಗಳನ್ನೇ ಒಪ್ಪಿಸಲು ಸಿದ್ಧರಾಗಿರುವರು. ಆದಕಾರಣ ನೀನೊಬ್ಬನೇ ಸೈನ್ಯದೊಡನೆ ಹೋದರೆ ಜಯವು ಕಷ್ಟವಾದೀತು. ಚೆನ್ನಾಗಿ ಆಲೋಚಿಸು.

**ಜರಾಸಂಧ**—(ಆಲೋಚಿಸಿ) ಇದೂ ಆಲೋಚಿಸತಕ್ಕ ವಿಷಯವೇ ಸರಿ. ಹಾಗಾದರೆ, ನನ್ನ ಮಿತ್ರ ಭೂಪಾಲರಾದ ಶಿಶುಪಾಲ ರುಕ್ಮಿ ಸೃಗಾಲ ಕರ್ಣ ದುರ್ಯೋಧನಾದಿಗಳ ಸಹಿತನಾಗಿ ಹೊರಟು ಮಥುರಾನಗರವನ್ನು ಮುತ್ತಿ ಆ ದ್ರೋಹಿಗಳಾದ ಕೃಷ್ಣ ಬಲರಾಮರನ್ನು ಹಿಡಿದು ಕಡಿದು ಅವರ ಸಿರಿಯನ್ನು ಸೂರೆಗೊಂಡು ನನ್ನ ಉದರದ ಕಿಚ್ಚನ್ನು ಶಾಂತಮಾಡಿಕೊಳ್ಳುವೆನು.

**ನಾರದ**—ಆಗಬಹುದು; ಸಂತೋಷ. ಇದೇ ತಕ್ಕ ಆಲೋಚನೆ.

**ಜರಾಸಂಧ—ಕಂ||** ತುಳ್ಕಿ ಪಯೋಧಗಳಹಿಪತಿ |
ಬಳ್ಕಿ ಮಹಾದಿಗ್ಗಜಪ್ರತಾನಂ ಭಯದಿಂ ||
ದಳ್ಕಿ ವಲಂ ಧರೆ ಕಂಪಿಸೆ |
ಧಳ್ಕಿಪುದೈ ಸಮರ ಭೇರಿಯಂ ಸಚಿವವರಾ || ೬ ||

(ಹೋಗುವರು.)

## ದೃಶ್ಯ ೩.—ಅರಮನೆಯ ಮುಂದೆ

**ನಾರದ**—ಆ ಜರಾಸಂಧನ ಮನಸ್ಸಿಗೆ ಕಿಡಿಯನ್ನು ತಗುಲಿಸಿ ಕಿಚ್ಚನ್ನೆಬ್ಬಿಸಿದುದಾಯಿತು. ಇನ್ನು ಶಿಶುಪಾಲ ರುಕ್ಮಿ ಸಾಲ್ವಾದಿಗಳೊಡಗೂಡಿ ಇವನು ಮಥುರೆಯಮೇಲೆ ದಂಡೆತ್ತಿ ಹೊರಡುವ ವಿಚಾರವನ್ನು ಮೊದಲೇ ಶ್ರೀಕೃಷ್ಣ ಬಲರಾಮರಿಗೆ ತಿಳಿಸಿ, ಅವರಿಂದ ಈ ದುಷ್ಟರೆಲ್ಲರಿಗೂ ತಕ್ಕ ಶಿಕ್ಷೆಮಾಡಿಸಿ, ಇವರ ಮದವನ್ನು ಮುರಿಯಬೇಕು.

ಇಲ್ಲವಾದರೆ ಇವರ ಉಪಟಳದಿಂದ ಸತ್ಯವಂತರೂ ಧರ್ಮಶೀಲರೂ ಆದ ಸಾಮಾನ್ಯ ಮಾನವಾಧಿಪತಿಗಳಿಗೆ ಉಳಿವೇ ಇಲ್ಲವಾಗುವುದು. ಆದುದರಿಂದ ನಾನೀಗಲೇ ಮಥುರೆಗೆ ಹೋಗಿ ಶ್ರೀಕೃಷ್ಣಪರಮಾತ್ಮನನ್ನು ಕಂಡು ಮುಂದಿನ ಕಾರ್ಯವನ್ನು ತ್ವರೆಗೊಳಿಸುವೆನು. (ಹೋಗುವನು.)

## ದೃಶ್ಯ ೪.—ಮಥುರಾನಗರದ ಅರಮನೆ.

(ಶ್ರೀಕೃಷ್ಣ ಬಲರಾಮರು ಮಾತನಾಡುತ್ತ ಪ್ರವೇಶಿಸುವರು.) ೬

**ಬಲರಾಮ**—ಕೃಷ್ಣಾ! ಕಾರಾಗೃಹದಲ್ಲಿ ಹುಚ್ಚನಾಗಿದ್ದ ತಾತನಾದ ಉಗ್ರಸೇನರಾಜನಿಗೆ ಕಂಸವಧೆಯ ವಾರ್ತೆಯು ತಿಳಿದರೆ ಆತನ ಹುಚ್ಚು ಪುತ್ರಶೋಕದಿಂದ ಮತ್ತಷ್ಟು ಹೆಚ್ಚಾಗಿ, ಆ ದುಃಖವನ್ನು ನಾವು ನೋಡಬೇಕಾದೀತೆಂಬ ಸಂಶಯವು ನನಗೆ ಬಹಳವಾಗಿತ್ತು. ಹಾಗಿಲ್ಲದೆ, ಆತನಿಗೆ ಆ ಉನ್ಮಾದಾವಸ್ಥೆಯು ತಪ್ಪಿ, ಆತನು ಆನಂದವನ್ನು ಪಡೆದು, ಪುತ್ರಶೋಕದಿಂದ ದುಃಖಿತನಾಗದೆಯೂ, ತನ್ನ ಪುತ್ರನನ್ನು ಸಂಹರಿಸಿದ ನಮ್ಮ ಮೇಲೆ ಆಗ್ರಹಮಾಡದೆಯೂ, ಸಂತೋಷಚಿತ್ತನಾಗಿರುವುದಾಶ್ಚರ್ಯವಲ್ಲವೇ?

**ಕೃಷ್ಣ**—ಅಣ್ಣಾ! ನಾನು ಹಾಗೆ ತಿಳಿದಿರಲಿಲ್ಲ. ಅವಿವೇಕಿಯಾಗಿಯೂ ಲೋಕಕಂಟಕನಾಗಿಯೂ ವರ್ತಿಸಿ, ತನ್ನನ್ನೂ ಮತ್ತು ನಮ್ಮ ತಾಯಿ ತಂದೆಗಳಾದ ದೇವಕೀ ವಸುದೇವರನ್ನೂ ನಿರ್ಬಂಧಿಸಿದ್ದ ಆ ಕಂಸನು ಯಾರಿಂದಲೂ ವಧಿಸಲ್ಪಡಲಿಲ್ಲವಲ್ಲಾ, ಎಂಬ ವ್ಯಥೆಯಿಂದ ಆತನಿಗೆ ಹುಚ್ಚುಹಿಡಿದಿತ್ತು. ಅದು ಈಗ ನಮ್ಮಿಂದ ನಿವಾರಣೆಯಾದಕಾರಣ ಆತನು ನಮ್ಮನ್ನು ಈ ರೀತಿ ಪ್ರೀತಿಸುತ್ತಿರುವನೆಂದು ನನ್ನ ಅಭಿಪ್ರಾಯವು.

**ಬಲರಾಮ**—ಕೃಷ್ಣಾ! ಏನು ಹೀಗೆ ಹೇಳುವೆ? ಪುತ್ರನು ಎಂಥವನಾಗಲಿ, ಅವನ ಮರಣವನ್ನು ತಂದೆಯು ಬಯಸುವನೇ?

**ಕೃಷ್ಣ**—ಧರ್ಮಜ್ಞನಾದವನು, ಕುಲಕ್ಕೆ ಕಳಂಕವನ್ನು ತರುವ ಲೋಕಕಂಟಕನನ್ನು ಪುತ್ರನೆಂದು ಭಾವಿಸುವನೇ? ಲೋಕ ವಿರೋಧಿಯಾದ

ವನು ಪುತ್ರನಾದರೂ ಪರಮ ಶತ್ರುವೆಂದೇ ತಿಳಿಯುವನು. ಹೀಗಿರು ವಲ್ಲಿ ಸಕಲಶಾಸ್ತ್ರವೇತ್ತನಾಗಿ, ಧರ್ಮಾಧರ್ಮಗಳ ಮರ್ಮವನ್ನು ಪರಿಶೀಲಿಸಿ, ಸಾರಾಸಾರವಿಚಾರಪರನಾಗಿ, ದೈವಭಕ್ತನಾಗಿಯೂ, ಧರ್ಮಶೀಲನಾಗಿಯೂ, ಲೋಕಾನಂದಕಾಕ್ಷಿಯಾಗಿಯೂ, ದುಷ್ಟ ನಿಗ್ರಹಾಪೇಕ್ಷಿಯಾಗಿಯೂ, ರಾಜಧರ್ಮನಿಪುಣನಾಗಿಯೂ ಇರುವ ನಮ್ಮ ತಾತನು ಪುತ್ರನೆಂಬ ವ್ಯಾಮೋಹದಿಂದ, ಆ ಅಧರ್ಮ ಶೀಲನೂ, ಲೋಕಕಂಟಕನೂ ಆದ ಕಂಸನ ಅಭ್ಯುದಯುವನ್ನ ಪೇಕ್ಷಿಸುವನೇ? ತನ್ನ ಪುತ್ರನಾದಮಾತ್ರಕ್ಕೇ ಅವನು ಶಿಕ್ಷಾರ್ಹನಲ್ಲ ವೆಂದಾತನು ಭಾವಿಸುವನೇ? ಚಂದನಾಟವಿಯಲ್ಲಿ ಕಿಚ್ಚುಹುಟ್ಟಿದಂತೆ ಈ ನಮ್ಮ ಉಗ್ರಸೇನಾನ್ವಯದಲ್ಲಿ ಹುಟ್ಟಿದ ಕಂಸನು ತನ್ನ ಕುಲದ ಹೆಸರೇ ಅಡಗಿ ಹೋಗುವಂತೆ ತನ್ನ ದುಷ್ಟತನವೆಂಬ ಅಗ್ನಿಯಿಂದ ಲೋಕವನ್ನು ಸುಡಲಾರಂಭಿಸಿದ್ದನು. ಅಂತಹದಾವಾಗ್ನಿಯನ್ನು ನಿರ್ಮೂಲಮಾಡಿದ ನಮ್ಮನ್ನು ತಾತನು ಪ್ರೀತಿಸಿ ಆನಂದದಿಂದ ಕೊಂಡಾಡುವುದು ಉಚಿತವಲ್ಲವೇ? ಜ್ಞಾನಿಗಳು ಲೋಕಹಿತದಿಂದ ಆನಂದಿಸುವರಲ್ಲದೆ ಅಜ್ಞರಂತೆ ಮೋಹಪಾಶಕ್ಕೆ ಸಿಕ್ಕುವರೇ?

**ಬಲರಾಮ**—ನಿಜ! ನಿಜ! ಇಂತಹ ಜ್ಞಾನಿಯಾದ ತಾತನಿಗೂ ನಮ್ಮ ತಾಯಿತಂದೆಗಳಿಗೂ ಈ ನಮ್ಮ ಕಾರ್ಯದಿಂದ ಸಂತೋಷವಾದುದರಿಂದ ನಮ್ಮ ಜನ್ಮವು ಸಾರ್ಥಕವಾಯಿತೆಂದು ಭಾವಿಸುವೆನು.

(ಒಳಗೆ) **ಕಂ**|| ಗೋಕುಲ ಜಲಧಿಶಶಾಂಕಾ |
ಲೋಕಾನಂದಕರ ರೂಪಜಿತಮೀನಾಂಕಾ ||
೭ ಪ್ರಾಕಟ ನವಲೀಲಾಂಕಾ |
ಶ್ರೀ ಕರುಣಾಭರಣ ತೋರು ಮುಖವಂ ಕೃಷ್ಣಾ || ೭ ||

(ಕೃಷ್ಣನು ಕಿವಿಗೊಟ್ಟು ಕೇಳುತ್ತ ನಿಂತುಕೊಳ್ಳುವನು.)

**ಬಲರಾಮ**—ಕೃಷ್ಣಾ! (ಕೃಷ್ಣನು ಮಾತನಾಡದಿರುವನು) ಸರಿ! ಕೃಷ್ಣನು ಇಲ್ಲಿ ಎಲ್ಲಿರುವನು! ಅವನ ಬಿಂಬವು ಮಾತ್ರ ಇಲ್ಲಿರುವುದು ಅಷ್ಟೆ! ಯಾರೋ ಗಾನಮಾಡುತ್ತಿರುವರು; ಇವನ ಮನಸ್ಸು ಆ ಗಾನದಲ್ಲಿ

ಲೀನವಾಗಿಹೋಯಿತು. ಒಳ್ಳೆಯ ಪುಣ್ಯಪುರುಷ! (ಭುಜವನ್ನು ಹಿಡಿದು ಅಲುಗಿಸಿ) ಕೃಷ್ಣಾ! ಏನಿದು?

**ಕೃಷ್ಣ**—(ಬೆಚ್ಚಿ) ಏನೂ ಇಲ್ಲವಣ್ಣಾ! ಅಲ್ಲಿ ಮಕರಂದನು ಕೂಗಿದಂತೆ ಕೇಳಿಸಿತು; ಆದುದರಿಂದ ಗಮನಿಸಿ ಕೇಳುತ್ತಿದ್ದೆ. ಅದೋ ಅವನೇ!

**ಮಕರಂದ**—(ಪ್ರವೇಶಿಸಿ) ಕೃಷ್ಣಾ, ಬಲರಾಮದೇವಾ, ನಮಸ್ಕಾರ.

**ಬಲರಾಮ**—ಓಹೋ! ಏನು ಮಕರಂದಾ? ಗೋಕುಲದಿಂದ ಬಂದೆಯಾ?

**ಮಕರಂದ**—ಅಹುದು, ವ್ಯಾಕುಲದಿಂದ ಬಂದೆ.

**ಕೃಷ್ಣ**—ವ್ಯಾಕುಲವೇತರಿಂದಲೋ?

**ಮಕರಂದ**—ನಿಮ್ಮ ಪ್ರಭಾವದಿಂದ.

**ಬಲರಾಮ**—ಹಾಗೆಂದರೆ?

**ಮಕರಂದ**—ಧನುರ್ಮಹದ ಉತ್ಸವವನ್ನು ಪೂರೈಸಿಕೊಂಡು ಕ್ಷಿಪ್ರದಲ್ಲಿ ಬರುವುದಾಗಿ ಹೇಳಿಬಂದ ನೀವುಗಳು ಈವರೆಗೂ ಗೋಕುಲಕ್ಕೆ ಬಾರದಿರುವ ಕಾರಣ, ಅಮ್ಮನೂ, ಅಪ್ಪನೂ, "ಕೃಷ್ಣ ಬರಲಿಲ್ಲ, ಬಲರಾಮ ಬರಲಿಲ್ಲ; ಬಲರಾಮ ಬರಲಿಲ್ಲ, ಕೃಷ್ಣ ಬರಲಿಲ್ಲ." ಎಂದು ಸದಾ ನಿಮ್ಮನ್ನೇ ನೆನೆ ನೆನೆದು ಚಿಂತಿಸುತ್ತಿರುವರು. ಆದುದರಿಂದ ನಿಮ್ಮ ಕುಶಲವನ್ನು ತಿಳಿದು ನಿಮ್ಮನ್ನು ಊರಿಗೆ ಕರೆದುಕೊಂಡು ಹೋಗೋಣವೆಂದು ಬಂದೆನು.

**ಕೃಷ್ಣ**—ಬಹಳ ಸಂತೋಷ. (ಬಲರಾಮನನ್ನು ನೋಡಿ) ಓಹೋ! ಅಣ್ಣಾ ನಿನ್ನನ್ನು ಬೇಗನೆ ಕಳುಹಿಸಿಕೊಡಬೇಕೆಂದು ತಾತನು ನನ್ನೊಡನೆ ಹೇಳಿದ್ದನು. ನಾನು ಅದನ್ನು ನಿನಗೆ ಹೇಳುವುದನ್ನು ಮರೆತೇ ಹೋಗಿದ್ದೆನು. ಈಗ ನೀನು ಅಲ್ಲಿಗೆ ಮೊದಲು ಹೋದರೆ ಉತ್ತಮ. ನಾನು ಮಕರಂದನೊಡನೆ ಮಾತನಾಡಿಕೊಂಡು ಬೇಗನೆ ಬರುವೆನು.

**ಬಲರಾಮ**—ಹಾಗೆಯೇ ಮಾಡು. ನಾನೀಗಲೆ ಹೋಗಿ ತಾತನನ್ನು ಕಾಣುವೆನು. (ಹೋಗುವನು.)

**ಕೃಷ್ಣ**—ಮಕರಂದಾ, ಈಗ ರಾಧೆಯು ನನ್ನನ್ನು ಕೂಗಿದಂತೆ ಧ್ವನಿಯು ಕೇಳಿಸಿತು. ರಾಧೆಯೂ ಬಂದಿರುವಳೇನು?

**ಮಕರಂದ**—ಬಂದಿರುವಳಪ್ಪಾ! ನೀನು ಮತ್ತೆ ಗೋಕುಲಕ್ಕೆ ಬರಲಿಲ್ಲವೆಂದು ರಾಧೆಯು ನಿದ್ರಾಹಾರಾದಿಗಳನ್ನು ತೊರೆದು ನಿನ್ನನ್ನು ಕಾಣುವ ಕುತೂಹಲದಿಂದ ಬಂದಿರುವಳು, ಇನ್ನೂ ವಸುಂಧರಾದಿ ಗೋಪಿಯರೂ ನಿನ್ನ ದರ್ಶನಾಕಾಂಕ್ಷಿಗಳಾಗಿ ಪರಿತಪಿಸುತ್ತಿರುವರು.

**ಕೃಷ್ಣ**—ಅವರ ಪ್ರೀತಿಯು ಅಸಾಧಾರಣವಾದುದು. ಮಕರಂದಾ! ರಾಧೆಯು ನನಗಾಗಿ ಬಹಳ ಕಷ್ಟಪಟ್ಟು ಇಲ್ಲಿಗೆ ಬಂದಿರುವಳು. ಆದುದರಿಂದ ಈ ದಿನ ಸಂಧ್ಯಾಕಾಲಕ್ಕೆ ನಮ್ಮ ಅರವಿಂದೋದ್ಯಾನದಲ್ಲಿ ನಾವಿಬ್ಬರೂ ಸ್ವಲ್ಪಹೊತ್ತು ವಿನೋದಾಲಾಪಗಳಿಂದ ಕಾಲಕಳೆಯಬೇಕೆಂದಿರುವೆನು. ನೀನೀಗಲೇ ಹೋಗಿ ಉಪವನದ ಲತಾಮಂಟಪ ಪ್ರದೇಶವನ್ನು ಉಚಿತ ರೀತಿಯಿಂದ ಅಲಂಕರಿಸು. ರಾಧೆಯನ್ನೀಗಲೇ ಇಲ್ಲಿಗೆ ಬರುವಂತೆ ಹೇಳು.

**ಮಕರಂದ**—ಆಗಲಿ, ಸಂತೋಷ. (ಹೋಗುವನು.)

**ಕೃಷ್ಣ**—ರಾಧೆಗೆ ನನ್ನ ವಿಷಯದಲ್ಲಿರುವ ಪ್ರೀತಿಭಕ್ತಿವಿಶ್ವಾಸಗಳಿಗಾಗಿ ಏನುಬೆಲೆಕೊಟ್ಟರೂ ಸಾಲದು!

**ರಾಧೆ**—ಕಂ|| ಗೋಕುಲ ಜಲಧಿಶಶಾಂಕಾ |........(ಹಾಡುತ್ತ ಬಂದು ಕೃಷ್ಣನಿಗೆ ವಂದಿಸಿ) ಮುಕುಂದಾ, ಕುಶಲದಿಂದಿರುವೆಯಾ? ನಾನು ಯಾರು ಜ್ಞಾಪಕವಿರುವುದೇ?

**ಕೃಷ್ಣ**—ರಾಧೇ! ಕುಶಲದಿಂದಿರುವೆನು. ಇದೇನು ವಿಚಿತ್ರ ಪ್ರಶ್ನೆಯು?

**ರಾಧೆ**—ನಿನ್ನ ನಡೆವಳಿಕೆಯು ವಿಚಿತ್ರವಾದುದರಿಂದ ನನ್ನ ಪ್ರಶ್ನೆಯೂ ವಿಚಿತ್ರವಾಯಿತು.

**ಕೃಷ್ಣ**—ಅದೇನು ಹಾಗೆನ್ನುವೆ?

**ರಾಧೆ**—ಹೇಗೆನ್ನುವುದೇನು! ಉತ್ಸವವಾದ ಮಾರನೆಯ ದಿನವೇ ಮತ್ತೆ ಗೋಕುಲಕ್ಕೆ ಬರುವೆನೆಂದು ಹೇಳಿಬಂದ ನೀನು ಈವರೆಗೂ ಬಾರದೆ ಇರುವೆಯಲ್ಲಾ! ಇದು ನ್ಯಾಯವೋ?

**ಕೃಷ್ಣ**—ರಾಧಾ! ನಾನು ಬರಬೇಕೆಂದೇ ಇದ್ದೆನು. ಇಲ್ಲಿ ಇನ್ನೂ ನನ್ನಿಂದಾಗಬೇಕಾದ ಕೆಲವು ಕಾರ್ಯಗಳು ಉಳಿದೇ ಇರುವವು! ಏನುಮಾಡುವುದು!

**ರಾಧೆ**—ಅಯ್ಯೋ! ಪಾಪ! ಕುಬ್ಜೆ ವನಮಾಲಿಕೆಯುರಂತಿರುವ ಎಷ್ಟೋ ಮಂದಿ ಮಹಾ ಭಕ್ತೆಯರು ತುಂಬಿರುವ ಈ ನಗರದಲ್ಲಿ ನಿನಗೆ ಎಷ್ಟೋ ಕಾರ್ಯಗಳಿಲ್ಲದಿರುವುವೇ ?

**ಕೃಷ್ಣ**—ರಾಧೇ! ನನಗೆ ಧನುರ್ಮಹೋತ್ಸವಕ್ಕೆ ಹೋಗುವಾಗ ಗಂಧ ಪುಷ್ಪಗಳನ್ನರ್ಪಿಸಿದ ದೈವಭಕ್ತೆಯುರಾದ ಅವರ ಕೋರಿಕೆಯಂತೆ ನಾನು ಅವರ ಸತ್ಕಾರವನ್ನು ಸ್ವೀಕರಿಸಿದುದು ಅಪರಾಧವೇ?

**ರಾಧೆ**—ನಾನು ಅಪರಾಧವೆನ್ನಲಿಲ್ಲವಲ್ಲಾ ! ವಕ್ರಾಂಗಿಯಾಗಿದ್ದ ಕುಬ್ಜೆಯನ್ನು ಸರಿಮಾಡಿದೆ. ವನಮಾಲಿಕೆಗೆ ವನಮಾಲಿಕೆಯನ್ನು ಹಾಕಿದೆ. ಇದು ನ್ಯಾಯುವೇ! ಹೀಗೆಯೇ ಇನ್ನೂ ಯಾರಯಾರನ್ನು ಅನುಗ್ರಹಿಸುವ ಕಾರ್ಯಗಳು ಉಳಿದಿರುವುವೋ! ಪಾಪ!

**ಕೃಷ್ಣ**—ರಾಧಾ, ನಿನ್ನದು ಯಾವಾಗಲೂ ಪರಿಹಾಸ್ಯವೇ! ನಾನು ರಾಜಕಾರ್ಯಗಳ ವಿಷಯುವನ್ನು ಕುರಿತು ಹೇಳಿದೆನು. ಅದಿರಲಿ, ಈಗ ನಾನು ಕ್ಷಿಪ್ರದಲ್ಲಿ ಹೋಗಿ ತಾತನನ್ನು ಕಾಣಬೇಕಾಗಿದೆ. ಆದುದರಿಂದ ನಾವಿಬ್ಬರೂ ಈದಿನ ಸಂಧ್ಯಾಕಾಲಕ್ಕೆ ಅರವಿಂದೋದ್ಯಾನದ ಲತಾಮಂಟಪದಲ್ಲಿ ಸಂಧಿಸಿ ಮಾತನಾಡೋಣ; ನೀನು ಅಲ್ಲಿಗೆ ಬಂದು ನನ್ನನ್ನು ಕಾಣು.

**ರಾಧೆ**—ಹಾಗೆಯೇ ಆಗಲಿ. ಬೇಗನೆ ಬರುವೆಯೋ ?

**ಕೃಷ್ಣ**—ನಿಜವಾಗಿಯೂ ಬರುವೆನು. (ಹೋಗುವರು.)

## ದೃಶ್ಯ ೫—ಅರವಿಂದೋದ್ಯಾನದ ವಿಲಾಸಮಂಟಪ ಪ್ರದೇಶ.

**ಮಕರಂದ**—ಆ ಕೃಷ್ಣನು ಹೇಳಿದಂತೆ ಲತಾಮಂಟಪ ಪ್ರದೇಶವನ್ನು ಅಲಂಕರಿಸಿದುದಾಯಿತು. ಆಹಾಹಾ! ಈ ಮಲ್ಲಿಗೆ ಸಂಪಿಗೆ ಪಾದರಿ ಹೂಗಳ ವಾಸನೆಯಿಂದ ನನಗೆ ತಲೆಯೆಲ್ಲವೂ ಒಡೆತಹತ್ತಿಬಿಟ್ಟಿತು. ಈ ಮರಗಳ ಮೇಲಿರುವ ಗಿಣಿಗಳೂ, ಕೋಗಿಲೆಗಳೂ, ಶಾರಿಕೆಗಳಾದರೋ ಕಲಕಲನೆ ಅರಚಿಕೊಳ್ಳುತ್ತಲೇ ಇವೆ. ನನ್ನ ಕಿವಿಗಳು ಚಿಟಗುಟ್ಟಿ ಕಿವುಡು ಹಿಡಿದುಹೋದವು. ಯಮುನಾನದಿಯಿಂದ ಗಾಳಿಯಾದರೋ

ತಣ್ಣಗೆ ಬೀಸುತ್ತಿರುವುದು. ಇಂತಹ ಸ್ಥಳಕ್ಕೆ ವಿನೋದವಿಹಾರಕ್ಕೆ ಬರುವನಂತೆ ನಮ್ಮ ಕೃಷ್ಣನು! (ಪಕ್ಕಕ್ಕೆ ನೋಡಿ) ಅದೋ! ರಾಧೆಯೂ ಬಂದೇಬಿಟ್ಟಳು!

**ರಾಧೆ**—(ಪ್ರವೇಶಿಸಿ ನೋಡಿ) ಏನೋ ಮಕರಂದಾ ಒಬ್ಬನೇ ಇರುವೆ?

**ಮಕರಂದ**—ಒಬ್ಬನು ಹೇಗೆ? ನೀನೊಬ್ಬಳು ಬಂದೆಯಲ್ಲಾ! ಇಬ್ಬರಾಗಲಿಲ್ಲವೇ?

**ರಾಧೆ**—ಸರಿ! ನೀನೊಬ್ಬ ಹುಚ್ಚನು. ಕೃಷ್ಣನಿನ್ನೂ ಬಂದಿಲ್ಲವೇನೋ?

**ಮಕರಂದ**—ಬಂದಿದ್ದರೆ ನಿನಗೆ ಕಾಣುತ್ತಿರಲಿಲ್ಲವೇ? ನನ್ನನ್ನು ಕೇಳಬೇಕೇ? ಅವನು ಬರುವುದು ಇನ್ನೂ ಹೊತ್ತಾಗುವುದಂತೆ.

**ರಾಧೆ**—(ಸ್ಮರಣೆಯನ್ನಭಿನಯಿಸಿ) ಓಹೋ! ಇದೂ ಅನುಕೂಲವೇ ಆಯಿತು. ಮಕರಂದಾ, ನಾನು ಶ್ರೀಕೃಷ್ಣನಿಗಾಗಿ ಕಟ್ಟಿದ್ದ ಸುಮಮಾಲೆಯನ್ನು ತಾರದೆ ಆತುರದಲ್ಲಿ ಮರೆತೇ ಬಂದೆನು. ಈಗಲೇ ಹೋಗಿ ಬೇಗನೆ ಅದನ್ನು ತರುವೆನು. ಆತನು ಬಂದರೆ, ನಾನು ಬಂದಿದ್ದೆನೆಂಬ ಗುರುತಿಗಾಗಿ ಈ ನನ್ನ ಮೇಲುವಸ್ತ್ರವನ್ನು ತೋರಿಸಿ, ಇಲ್ಲಿಯೇ ಇರುವಂತೆ ಹೇಳುವೆಯಾ? (ವಸ್ತ್ರವನ್ನು ಕೊಡುವಳು.)

**ಮಕರಂದ**—ಆಗಲಿ. (ವಸ್ತ್ರವನ್ನು ತೆಗೆದುಕೊಂಡು) ನೀನು ಸಾವಕಾಶವಾಗಿ ಬಾ, ಇನ್ನೂ ವಿರಾಮವಿರುವುದು.

**ರಾಧೆ**—ಆಗಲಿ. (ಹೋಗುವಳು.)

**ಮಕರಂದ**—ಇನ್ನೂ ಕೃಷ್ಣನು ಯಾವಾಗ ಬರುವನೋ ಏನೋ! ಆತನು ಬರುವವರೆಗೂ ಈ ವಸ್ತ್ರವನ್ನು ಹೊದ್ದು ಈ ಶಿಲಾತಲ್ಪದ ಮೇಲೆ ಮಲಗಿರುವೆನು. (ರಾಧೆಯ ವಸ್ತ್ರವನ್ನು ಮುಸುಕಿಟ್ಟು ಮಲಗುವನು).

**ಕೃಷ್ಣ**—(ಪ್ರವೇಶಿಸಿ)

**ಕಂ||** ನವಸುಮ ಪರಿಮಳಮಂ ಬೀ |
ರುವ ಮಂದಸಮೀರನಿಂದಮಳಿ ಝೇಂಕೃತದಿಂ ||
೯ ವಿವಿಧ ವಿಹಂಗಾವಳಿವ್ಯಾಹೃದು |
ರವದಿಂಬಗೆಗೊಳ್ಳ ವನಮಿದೇಂ ರಮಣೀಯಂ! || ೮ ||

(ಸುತ್ತಲೂ ನೋಡಿ) ಅದೋ! ರಾಧೆಯು ಆಗಲೇ ಬಂದು ಶಿಲಾತಲ್ಪದ ಮೇಲೆ ವಿಶ್ರಮಿಸಿಕೊಂಡಿರುವಳು! ಪಾಪ! ನನಗಾಗಿ ಎಷ್ಟುಶ್ರಮ ಪಟ್ಟು ಬಂದಿರುವಳು! (ಮಲಗಿರುವ ಮಕರಂದನ ಬಳಿಗೆ ಬಂದು) ರಾಧೇ! ರಾಧೇ! (ಮಾತನಾಡದಿರುವುದನ್ನು ಕಂಡು) ಏನು! ನಿದ್ದೆಯೋ! ಇಲ್ಲ, ನನ್ನಾಗಮನ ನಿರೀಕ್ಷಣೆಯಿಂದಿರುವ ನಿನಗೆ ನಿದ್ದೆಯೆಂದರೇನು! ಇಲ್ಲ! ನಿದ್ದೆಯಲ್ಲ! ರಾಧೇ! ಏಳು! (ಆತ್ಮಗತ) ನನ್ನ ಮನಸ್ಸನ್ನು ಪರೀಕ್ಷಿಸಲು ಹೀಗೆ ಕೋಪವನ್ನೇನಾದರೂ ನಟಿಸುತ್ತಿರಬಹುದೇ! (ಪ್ರಕಾಶಂ)

**ಕಂ**|| ಗೋಪಾಲಹರ್ಷಕಾರಿಣಿ |
ಗೋಪೀಮಣಿ ವಚನ ವಿಜಿತ ಶುಕಮೃದುವಾಣೀ ||
೧೦ ಕೋಪಮನುಳಿಯುತೆ ಮಧುರಾ |
ಲಾಪದೆ ಮುದವೀವುದೆನಗೆ ರಾಧಾರಮಣೀ || ೧೦ ||

**ಮಕರಂದ**—(ಎದ್ದು ಮುಸುಕನ್ನು ತೆರೆದು) ಅಯ್ಯೋ! ರಾಧೆಯಲ್ಲವಯ್ಯಾ, ನಾನು ಮಕರಂದನು.

**ಕೃಷ್ಣ**—(ನಾಚಿ ನಕ್ಕು) ಇದೇನೋ ಮಕರಂದಾ, ಈ ಅವತಾರವು? ಈ ವಸ್ತ್ರವು ರಾಧೆಯದಲ್ಲವೇ? ನಿನಗೆ ಹೇಗೆ ಸಿಕ್ಕಿತು? ಏನು ಕಥೆ?

**ಮಕರಂದ**—ರಾಧೆಯು ನಿನ್ನನ್ನು ನೋಡಲೆಂದು ಇಲ್ಲಿಗೆ ಬಂದಳು. ನೀನು ಇರಲಿಲ್ಲ. ಅಷ್ಟರಲ್ಲಿ ತಾನು ನಿನಗಾಗಿ ಕಟ್ಟಿದ್ದ ಪುಷ್ಪಮಾಲಿಕೆಯನ್ನು ತರುವುದಾಗಿ ಹೇಳಿ, ಈ ವಸ್ತ್ರವನ್ನು ತಾನು ಬಂದಿದ್ದ ಗುರುತಿಗಾಗಿ ನಿನಗೆ ತೋರಿಸುವಂತೆ ಹೇಳಿ ಹೋದಳು. ನನಗೆ ಸ್ವಲ್ಪ ನಿದ್ದೆ ಬಂತು; ಇದನ್ನು ಹೊದ್ದು ಹಾಗೆಯೇ ಮಲಗಿಕೊಂಡೆನು. ಅಷ್ಟರಲ್ಲಿಯೇ ವಿಘ್ನವಾಗಿ ನೀನು ಬಂದುಬಿಟ್ಟೆ. ನನ್ನ ನಿದ್ದೆ ಹೋಯಿತು ನಿನ್ನಿಂದ.

**ಕೃಷ್ಣ**—ಸರಿ, ನಿನಗೆ ಯಾವಾಗಲೂ, ನಿದ್ದೆ! ನಿದ್ದೆ! ಅದಿರಲಿ, ರಾಧೆಯು ಮತ್ತೆ ಇಲ್ಲಿಗೆ ಬರುವಳಷ್ಟೆ?

**ಮಕರಂದ**—ಸರಿ! ನನ್ನ ನಿದ್ದೆ ಹೋದರೂ ಹೋಗಲಿ, ನಿನಗೆ ರಾಧೆ, ರಾಧೆ, ರಾಧೆ! ಒಳ್ಳೆಯ ವೇಧೆ! ಪುಷ್ಪಮಾಲಿಕೆಯನ್ನು ತರಲು

ಹೋಗಿರುವಳೆಂದು ಆಗಲೆ ಹೇಳಲಿಲ್ಲವೇ? ಇನ್ನು ಸ್ವಲ್ಪ ಹೊತ್ತಿನೊಳಗಾಗಿ ಬಂದೇ ಬರುವಳು.

**ಕೃಷ್ಣ**—ಸರಿ, ಹಾಗಾದರೆ, ನಾನು ಆ ಲತಾಮಂಟಪಕ್ಕೆ ಹೋಗಿ ಬರುವೆನು.

**ಮಕರಂದ**—ಆಗಬಹುದು, ಹಾಗೆಯೇ ಆಗಲಿ.

(ಕೃಷ್ಣನು ಹೋಗುವನು. ಮಕರಂದನು ಮತ್ತೆ ವಸ್ತ್ರವನ್ನು ಹೊದ್ದು ಮಲಗುವನು.)

**ರಾಧೆ**—(ಪುಷ್ಪಮಾಲಿಕೆಯೊಡನೆ ಪ್ರವೇಶಿಸಿ, ಮುಸುಕಿಟ್ಟು ಮಲಗಿದ್ದ ಮಕರಂದನನ್ನು ನೋಡಿ ಕೃಷ್ಣನೆಂಬ ಭ್ರಾಂತಿಯಿಂದ) ಅದೋ! ನಮ್ಮ ಗೋಪಾಲಕೃಷ್ಣನಾಗಲೆ ಬಂದು ನನ್ನ ವಸ್ತ್ರವನ್ನೇ ಹೊದ್ದು ಮಲಗಿರುವನು! (ಮುಂದೆ ಬರುತ್ತ)

**ಕಂ||** ಕಮಲದಳಾಯತನಯನಾ |
ಹಿಮಕರನಿಭವದನ ಮುದಿತಗೋಪೀಲಲನಾ ||
೧೧ ಸುಮಧುರತರ ಮೃದುವಚನಾ |
ನಮಿಪೆಂ ಶ್ರೀಕೃಷ್ಣ ಸರ್ವಮಂಗಳಸದನಾ || ೧೧ ||

**ಮಕರಂದ**—(ಎದ್ದು ಮುಸುಕನ್ನು ತೆರೆದು) ಸುಖವಾಗಿ ನಿದ್ದೆಮಾಡೋಣವೆಂದರೆ ಏನಾದರೂ ಒಂದು ಕಾಟ!

**ರಾಧೆ**—(ಬೆಚ್ಚಿ) ಛೀ! ಛೀ! ಇದೇನೋ ಮಕರಂದಾ ಈ ಅವಿವೇಕವು? ನನ್ನ ವಸ್ತ್ರವನ್ನು ಹೊದ್ದುಕೊಂಡೇತಕ್ಕೆ ಮಲಗಿದೆ? ನಾನು ಕೃಷ್ಣನೆಂದು ಭ್ರಾಂತಳಾದೆನಲ್ಲವೋ!

**ಮಕರಂದ**—ನಿದ್ದೆ ಬಂತು, ಹೊದ್ದು ಮಲಗಿದೆ. ಅದು ತಪ್ಪೇ?

**ರಾಧೆ**—ಚಿಂತೆಯಿಲ್ಲ, ಶ್ರೀಕೃಷ್ಣನು ಇನ್ನೂ ಬರಲೇ ಇಲ್ಲವೇ?

**ಮಕರಂದ**—ಬಂದು ಆ ಸರೋವರದ ಬಳಿಯ ಲತಾಮಂಟಪದಲ್ಲಿರುವನು.

**ರಾಧೆ**—(ಶ್ರೀಕೃಷ್ಣನು ಬರುತ್ತಿರುವುದನ್ನು ಕಂಡು. ಓಡಿಬಂದು.)

**ಕಂ||** ವಸುಧಾನಂದಕಲೀಲಾ |
ವಸುಗಣನುತ ಚರಿತ, ವೇಣುಗಾನವಿಲೋಲಾ ||
೧೨ ಅಸಮಕೃಪಾಕಲ್ಲೋಲಾ |
ಬಿಸಜೇಕ್ಷಣ ಮಣಿವೆನಿಂದು ನಾಂ ಗೋಪಾಲಾ || ೧೨ ||

(ಪುಷ್ಪಮಾಲಿಕೆಯನ್ನು ಹಾಕುವಳು.)

ಕೃಷ್ಣಾ ಈ ಮಕರಂದನು ನನ್ನ ವಸ್ತ್ರವನ್ನು ಹೊದ್ದು ಮಲಗಿ, ನನಗೆ ವಿಚಿತ್ರ ಭ್ರಾಂತಿಯನ್ನುಂಟುಮಾಡಿದನು.

**ಕೃಷ್ಣ**—ನನಗೂ ಅದೇರೀತಿ ಮಾಡಿ, ನನ್ನನ್ನು ಗೇಲಿಗೆಬ್ಬಿಸಿದನು. ಅವನ ಕುಚೇಷ್ಟೆಗಳಿಗೆ ಪಾರವೆಲ್ಲಿಯದು !

**ಮಕರಂದ**—ಸರಿ ! ಗೋಕುಲದ ಕುಂಜವನದಲ್ಲಿ ನೀವುಗಳು ಆಡುತ್ತಿದ್ದ ಲೀಲೆಗಳನ್ನು ಸ್ವಲ್ಪಮಟ್ಟಿಗೆ ಜ್ಞಾಪಿಸಿ ನಿಮ್ಮನ್ನು ವಿನೋದ ಪಡಿಸೋಣವೆಂದು ಹಾಗೆ ಮಾಡಿದೆನು. ಅಷ್ಟೆ ! ನಾನು ಅಪರಾಧ ಮಾಡಿದ್ದರೆ ಕ್ಷಮಿಸಿ.

**ಕೃಷ್ಣ**—ನೀನು ಅಪರಾಧಿಯಲ್ಲ. ಮಕರಂದಾ, ನೀನಿಲ್ಲದಿದ್ದರೆ ನಮ್ಮ ವಿನೋದಕ್ಕೆ ಶೋಭೆಯೇ ಇರುವುದಿಲ್ಲ.(ರಾಧೆಯನ್ನು ನೋಡಿ) ಪ್ರಿಯರಾಧೇ, ನಿನ್ನ ಪ್ರೀತಿಯೂ, ಭಕ್ತಿಯೂ ಅಸಾಧಾರಣವಾದುವು. ನೀನು ನಿನ್ನ ದೇಹಶ್ರಮವನ್ನು ಗಮನಿಸದೆ ನನಗಾಗಿ ಗೋಕುಲದಿಂದ ಬಂದಿರುವೆ ಯಲ್ಲವೇ ! ನಾನು ಇದಕ್ಕಾಗಿ ನಿನ್ನ ಪ್ರೇಮವನ್ನೆಷ್ಟು ಕೊಂಡಾಡಲಿ ! ನನ್ನ ಸಂತೋಷವನ್ನು ಹೇಗೆ ತೋರ್ಪಡಿಸಲಿ ! ನನಗೆ ಆನಂದಾತಿ ಶಯದಿಂದ ಒಂದೂ ತೋರದಿರುವುದು.

**ರಾಧೆ**—ಶ್ರೀಕೃಷ್ಣಾ ! ನನಗೆ ನಿನ್ನಲ್ಲಿ ಭಕ್ತಿ ವಿಶ್ವಾಸ ಪ್ರೇಮಗಳಿರುವು ವೆಂದು ನೀನು ಗ್ರಹಿಸಿ ನನಗೆ ಮತ್ತೆ ದರ್ಶನವನ್ನು ಕೊಟ್ಟು ಆನಂದಿಸಿದೆ ಯಲ್ಲವೇ ! ಶ್ರೀಕೃಷ್ಣಪರಮಾತ್ಮಾ ! ನಿನ್ನ ಬಿಂಬವು ನಮ್ಮ ಎಲ್ಲರ ಹೃದಯಗಳಲ್ಲಿಯೂ ಸ್ಥಿರವಾಗಿ ನೆಲೆಸಿರುವುದು. ಗೋಕುಲದಲ್ಲಿ ನಿನ್ನನ್ನು ನೋಡಲಾತುರರಾಗಿ ಪ್ರತಿಕ್ಷಣವೂ ನಿನ್ನ ಆಗಮನವನ್ನು ನಿರೀಕ್ಷಿಸ ದವರೇ ಇಲ್ಲ. ನಂದಗೋಪ ಯಶೋದೆಯರು ನಿನ್ನನ್ನು ನೋಡುವಾ ತುರದಿಂದ ನಿದ್ರಾಹಾರಗಳನ್ನು ಗಮನಿಸದೆ ಚಿಂತಿಸುತ್ತಿರುವರು. ನಮ್ಮೆಲ್ಲರಲ್ಲಿಯೂ ನಿನಗೆ ಪರಮಪ್ರೀತಿಯಿರುವುದರಿಂದ ನಮ್ಮ ಪ್ರಾರ್ಥನೆಯನ್ನು ನಿರಾಕರಿಸಲಾರೆಯೆಂದು ತಿಳಿದು, ಬಲರಾಮನನ್ನೂ ನಿನ್ನನ್ನೂ ಕರೆತರುವಂತೆ ಅವರು, ನನ್ನನ್ನೂ ಮಕರಂದನನ್ನೂ ನಿನ್ನಲ್ಲಿಗೆ ಕಳುಹಿಸಿರುವರು. ಆದುದರಿಂದ ನೀನು ಹೇಗಾದರೂ ಅವಕಾಶಮಾಡಿ ಕೊಂಡು ಒಂದಾವೃತ್ತಿ ಗೋಕುಲಕ್ಕೆ ಬಂದು ನಮ್ಮ ಗೋಪಿಯರನ್ನೂ

ಗೋಪಾಲಬಾಲರನ್ನೂ ಗೋವುಗಳನ್ನೂ ನೋಡಿ ಅವರನ್ನಾನಂದ ಪಡಿಸಬೇಕೆಂದು ಬೇಡುವೆವು.

**ಕೃಷ್ಣ**—ರಾಧಾ, ಬಹಳ ಸಂತೋಷ, ಬರುವೆನು. ನನಗೂ ನಮ್ಮ ತಾಯಿತಂದೆಗಳನ್ನೂ, ಗೋಪೀಜನರನ್ನೂ, ಮಿತ್ರರಾದ ಗೋಪಾಲ ಕರನ್ನೂ, ಗೋವುಗಳನ್ನೂ ನೋಡಬೇಕೆಂಬ ಕುತೂಹಲವು ಬಹಳ ವಾಗಿರುವುದು. ಬರುವೆನು. (ವೀಣಾಗಾನವು ಕೇಳಿಬರುವುದು) ಓಹೋ! ನಾರದರು ನನ್ನನ್ನು ಹುಡುಕಿಕೊಂಡು ಇತ್ತಲೇ ಬರುತ್ತಿರುವಂತೆ ಕಾಣುವುದು.

**ನಾರದ**—(ಪ್ರವೇಶಿಸುವನು.) ೧೩

**ಕೃಷ್ಣ**—ಪೂಜ್ಯರಿಗೆ ವಂದಿಸುವೆನು, ಈ ಪೀಠವನ್ನಲಂಕರಿಸಬೇಕು.

**ನಾರದ**—ವಿಜಯೋಸ್ತು. ಓಹೋ! ಇದೇನು? ರಾಧೆಯೂ ಮುಕ ರಂದನೂ ಬಂದಿರುವರು!

**ಕೃಷ್ಣ**—ಪೂಜ್ಯರೇ, ನನ್ನನ್ನೂ ಅಣ್ಣನನ್ನೂ ಕರೆತರಬೇಕೆಂದು ಗೋಕುಲ ದಿಂದ ನಮ್ಮ ತಾಯಿತಂದೆಯರು ಇವರನ್ನು ಕಳುಹಿಸಿರುವರು.

**ನಾರದ**—(ಕುಳಿತು) ಸಂತೋಷ. ಆದರೆ ಶ್ರೀಕೃಷ್ಣಪರಮಾತ್ಮಾ, ನಿನಗೆ ನಾನೊಂದು ವಿಶೇಷ ವಾರ್ತೆಯನ್ನು ತಿಳಿಸಲು ಆತುರನಾಗಿ ಬಂದೆನು.

**ಕೃಷ್ಣ**—ತಾವು ದಯಮಾಡಿಸಿದಾಗಲೇ ಏನೋ ವಿಶೇಷ ಸಮಾಚಾರವನ್ನು ತಂದಿರಬಹುದೆಂದು ನಾನು ಊಹಿಸಿದೆನು. ಅಪ್ಪಣೆಯಾಗಬೇಕು.

**ನಾರದ**—ನಾನು ಮಗಧರಾಜಧಾನಿಗೆ ಹೋಗಿದ್ದೆನು. ಅಲ್ಲಿ ಕಂಸ ವಧೆಯು ವೃತ್ತಾಂತವನ್ನು ಕೇಳಿದ ಜರಾಸಂಧನು ಪ್ರಳಯಕಾಲ ರುದ್ರನಂತೆ ಕೆರಳಿ, ನಿಮ್ಮ ಮೇಲಣ ಆಕ್ರೋಶದಿಂದ ಯಾದವ ವಂಶ ವನ್ನೇ ನಿರ್ಮೂಲಮಾಡುವೆನೆಂಬ ಶಪಥಮಾಡಿರುವನು. ಅಲ್ಲದೆ ಶಿಶು ಪಾಲ ರುಕ್ಮಿ ಸಾಲ್ವಾದಿಗಳ ಸಹಾಯವನ್ನು ಪಡೆದು ಮಹಾ ರೌದ್ರಾ ವೇಶದಿಂದ ಮಥುರಾನಗರದ ಮೇಲೆ ದಂಡೆತ್ತಿಬರುವ ಪ್ರಯತ್ನ ಮಾಡಿರುವನು. ಆದಕಾರಣ ನೀವು ತಕ್ಕ ಸಿದ್ಧತೆಯಿಂದ ಅವರಿಗಿದಿ ರಾಗಿ, ಸಮರದಲ್ಲಿ ಆ ದುಷ್ಟರೆಲ್ಲರಿಗೂ ತಕ್ಕ ಶಿಕ್ಷೆಮಾಡಿ, ಅವರಿಂದ

ಬಾಧಿತರಾಗಿರುವ ಮಾನವಾಧಿಪತಿಗಳನ್ನು ಸುರಕ್ಷಿತರನ್ನಾಗಿ ಮಾಡಿ, ಕೀರ್ತಿಭಾಗಿಗಳಾಗಬೇಕು. ಈ ಮುಂದೆಚ್ಚರಿಕೆಯನ್ನು ಕೊಡಲು ನಾನಿಲ್ಲಿಗೆ ಬಂದೆನು.

**ಕೃಷ್ಣ**—ಓಹೋ! ಜರಾಸಂಧನು ಕೆರಳಿರುವನೇ? ಅಳಿಯನ ಅಳಿವಿಂದ ಅವನು ಕೆರಳಿರುವುದು ನ್ಯಾಯವೇ ಸರಿ. ಕಂಸನು ಯಮಲೋಕ ಯಾತ್ರೆಮಾಡಿ ದಾರಿಯನ್ನು ತೋರಿದನು. ಈಗ ಜರಾಸಂಧನೂ ಅವನನ್ನೇ ಅನುಸರಿಸಿ ಹೋಗಲು ಪ್ರಯತ್ನಿಸಿರುವನು. ಇನ್ನು ಅವನ ಮಿತ್ರರಾದ ದುಷ್ಟ ಶಿಶುಪಾಲಾದಿಗಳೂ ಅವನ ಮಾರ್ಗವನ್ನೇ ಹಿಡಿಯು ವರು. ಆಗಲಿ. ಪೂಜ್ಯರೇ, ಈಗ ಏನು ಮಾಡುವುದು? ಈಕಡೆ ರಾಜ ಕಾರ್ಯ! ಆಕಡೆ ಮಾತಾಪಿತೃಗಳ ಆಜ್ಞೆ ಮತ್ತು ಪ್ರಿಯಜನರ ಪ್ರಾರ್ಥನೆ! ಯಾವುದನ್ನು ಮಾಡುವುದು? ಯಾವುದನ್ನು ಬಿಡುವುದು?

**ನಾರದ**—ಶ್ರೀಕೃಷ್ಣಪರಮಾತ್ಮಾ! ಈ ವಿಷಯದಲ್ಲಿ ನಿನಗೆ ತಿಳಿಯದ ಗುರುಲಘುಭಾವವೇನಿರುವುದು! ಜರಾಸಂಧನು ಪ್ರಬಲ ಸೈನ್ಯದೊಡನೆ ಅತಿಕ್ಷಿಪ್ರದಲ್ಲಿ ಇಲ್ಲಿಗೆ ಯುದ್ಧಸನ್ನದ್ಧನಾಗಿ ಬರತಕ್ಕವನಾಗಿರುವನು. ಪ್ರಭುಗಳಿಗೆ ಪ್ರಜಾಸುಖದ ಗಮನವು ಮೊದಲು, ತಮ್ಮ ಸುಖವು ಅನಂತರ; ಹೀಗಿರುವಲ್ಲಿ, ಕ್ಷಿಪ್ರದಲ್ಲಿ ಒದಗುವ ರಾಕ್ಷಸರ ಬಾಧೆಯಿಂದ ನಿಮ್ಮ ಪುರವನ್ನು ರಕ್ಷಿಸಿ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡು ವುದೇ ಈಗ ನಿನ್ನ ಪ್ರಥಮಕರ್ತವ್ಯವು. ಆದುದರಿಂದ ಮೊದಲು ನೀನೂ ಬಲಭದ್ರನೂ ಅದನ್ನು ಗಮನಿಸಿರಿ. ಅವಶ್ಯವಾದರೆ ನಾನೂ ಗೋಕುಲಕ್ಕೆ ಹೋಗಿ, ನಂದಗೋಪಯಶೋದೆಯರಿಗೆ ಈ ವಿಚಾರವನ್ನು ತಿಳಿಸಿ, ಅವರನ್ನು ಸಮಾಧಾನಪಡಿಸುವೆನು.

**ಕೃಷ್ಣ**—ಸಂತೋಷ. ರಾಧಾ, ಮಕರಂದಾ, ಪೂಜ್ಯರು ಹೇಳಿದ ವಿಷಯ ಗಳೆಲ್ಲವೂ ತಿಳಿಯಿತಷ್ಟೆ? ನಾನೂ ಅಣ್ಣನೂ ಈಗ ಒದಗಿರುವ ಮಹಾ ಯುದ್ಧವು ಶಮನವಾದ ಒಡನೆಯೇ ಗೋಕುಲಕ್ಕೆ ಬರುವೆವೆಂದು ಅಮ್ಮನಿಗೂ ಅಪ್ಪನಿಗೂ ಗೋಪಿಯರಿಗೂ ಗೋಪಾಲಕರಿಗೂ ಹೇಳು ವುದಲ್ಲದೆ, ಈಗ ರಾಜಕಾರ್ಯಗೌರವದಿಂದ ಬಾರದೆ ನಿಂತ ನಮ್ಮ ಅಪ ರಾಧಕ್ಕೆ ಕ್ಷಮೆಯನ್ನು ಬೇಡಿದೆವೆಂದು ತಿಳಿಸಿ.

**ರಾಧೆ-ಮಕರಂದ**—ನಿನ್ನ ಇಷ್ಟದಂತಾಗಲಿ, ಇದಕ್ಕೆ ಪ್ರತಿ ಹೇಳಲು ನಾವು ಶಕ್ತರಲ್ಲ.

**ಕೃಷ್ಣ**—(ನಾರದನನ್ನು ನೋಡಿ) ಪೂಜ್ಯರೇ, ತಮ್ಮ ಅಪ್ಪಣೆಯಂತೆಯೇ ನಡೆಯುವೆನು.

**ಕಂ||** ಸತ್ಯಾಸತ್ಯಮನರಿಯದೆ |
ಕೃತ್ಯಾಕೃತ್ಯದ ವಿವೇಚನೆಯ ಮಾಡದೆ ಮೇ ||
ಣತ್ಯಧಿಕಮದದೆ ಬರ್ಪ |
ದೈತ್ಯರ ಪಿಡಿದ್ಪೈದೆ ಕಾಲನಗರಿಗೆ ತೂಳ್ವೆಂ || ೧೩ ||

ಅಣ್ಣನೊಡನೆ ಆಲೋಚಿಸಿ, ಅಕ್ರೂರಕೃತವರ್ಮಾದಿಗಳಿಗೆ ಸೈನ್ಯವನ್ನು ಸಿದ್ಧಗೊಳಿಸುವಂತೆ ಎಚ್ಚರಿಸಿ, ತಾತನಿಗೆ ಈ ವಿಚಾರವನ್ನು ತಿಳಿಸಿ, ಮುಂದಿನ ಸಮರಸನ್ನಾಹಗಳನ್ನು ಮಾಡುವೆನು. ಪೂಜ್ಯರೇ ತಾವು ಪೂರ್ವಭಾವಿಯಾಗಿ ನಮಗೆ ಎಚ್ಚರಿಕೆಯನ್ನು ಕೊಟ್ಟುದಕ್ಕಾಗಿ ತಮಗೆ ಕೃತಜ್ಞನಾಗಿರುವೆನು. ೧೪

**ನಾರದ**—ಸಂತೋಷ, ವಿಜಯಶಾಲಿಗಳಾಗಿ. (ಹೋಗುವನು.)

## ದೃಶ್ಯ ೫.—ಮಥುರಾಪುರ ಪ್ರಾಂತ್ಯ

(ಜರಾಸಂಧನು ಶಿಶುಪಾಲ ರುಕ್ಮಿ ಕುಮಾರ ಸಾಲ್ವಾದಿಗಳೊಡನೆ ಪ್ರವೇಶಿಸುವನು).

**ಜರಾಸಂಧ**—

**ವೃ||** ಕಡಲೇಳಂ ಕುಡಿವೆಂ ಕುಲಾದ್ರಿಕುಲಮಂ ಚೆಂಡಾಡುವೆಂಶೇಷನಂ|
ಮಿಡಿವೆಂ ಮತ್ತೆ ಕುಲಾಲ ಚಕ್ರಮೆನಲೀ ಭೂಚಕ್ರಮಂ ತಿರ್ರನೊ ||
ರ್ಕಡೆಯಿಂ ಸುತ್ತಿಪೆನೆನ್ನಬಾಹುಬಲದಿಂ ಬ್ರಹ್ಮಾಂಡಮಾಸ್ಫೋಟಿಪೆಂ |
ಬಡಗೋಪಾಲರನಾರ್ದುಕೊಲ್ವುದು ಜರಾಸಂಧಂಗದೇಂಲಕ್ಷ್ಯ ಮೇ ||

ವಿರೂಪಾಕ್ಷಾ, ಮಥುರಾನಗರದ ಕೋಟೆಯು ಕಾಣುತ್ತಿರುವುದು. ಸೈನ್ಯವೆಲ್ಲವನ್ನೂ ಕ್ರಮವರಿತು ನಡೆಯಿಸಿ ಪುರವನ್ನು ಮುತ್ತಬೇಕು. ಶಿಶುಪಾಲಭೂಪಾಲಾ, ನಮ್ಮ ಬರವನ್ನರಿತು ಆ ಕೃಷ್ಣ ಬಲರಾಮ ರಿಬ್ಬರೂ ಬಂದು ನಮ್ಮನ್ನೆದುರಿಸುವರು. ಆಗ ನೀನು ಕೃಷ್ಣನಿಗೆ ಇದಿರಾಗು, ನಾನು ಆ ಬಲರಾಮನನ್ನು ವಿಚಾರಿಸಿಕೊಳ್ಳುವೆನು. ಅವರಿಬ್ಬ

ರನ್ನೂ ನಾವು ಆಹುತಿದೆಗೆದುಕೊಂಡುದೇ ಆದರೆ ಮಥುರಾಪುರದ ಸಿರಿಯೆಲ್ಲವೂ ನಮ್ಮ ವಶವಾಗುವುದು.

**ಶಿಶುಪಾಲ**—ಜರಾಸಂಧಭೂಪಾಲಾ! ಆ ಬಡಗೋವಳರನ್ನು ಧ್ವಂಸ ಮಾಡಲು ಇಷ್ಟು ಆಲೋಚನೆಯೇನು? ಅವರಿಬ್ಬರನ್ನೂ ಕ್ಷಣಾರ್ಧ ದಲ್ಲಿ ಮೆಟ್ಟಿ ಸೀಳುವ ಭಾರವು ನನ್ನದು. ೧೫

**ಕಂ||** ಧುರಕ್ಕೈತರ್ಪ ಹರಿಯಂ|
ಹರಿದಿಡುವೆಂ ಬಲನ ಬಲದ ಬಲಿಯಂ ಕೊಳ್ವೆಂ||
ಶರದಿಂ ಶಸ್ತ್ರದಿನವರಾ|
ಶರೀರಮಂ ಪರಿದು ತರಿದು ಪಿರಿದುಂ ನಲಿವೆಂ || ೧೫ ||

**ಜರಾಸಂಧ**—ಶಿಶುಪಾಲಾ, ನೀನು ಅಂತಹ ಪ್ರತಾಪಶಾಲಿಯೇ ನಿಜ. (ಮುಂದೆ ನೋಡಿ) ಅದೋ! ಅದೋ! ಅಗಣಿತವಾದ ಯಾದವ ಸೈನ್ಯವು ಪುರದ್ವಾರದಿಂದ ಪುಂಖಾನುಪುಂಖಗಳಾಗಿ ಸಾಗರತರಂಗಗಳಂತೆ ಪಾರ ವಿಲ್ಲದೆ ಬರುತ್ತಿರುವುದು! ಆಹಾ! ಎಷ್ಟು ಅಗಾಧವಾದ ಸೈನ್ಯವು!

**ಶಿಶುಪಾಲ**—ಬರಲಿ! ಬರಲಿ! ಪ್ರಳಯಾಗ್ನಿವಾಯುಗಳಂತಿರುವ ನಾವು ಗಳು ಸೇರಿರುವಲ್ಲಿ, ಪತಂಗ ಸಂಘದಂತಿರುವ ಆ ಯಾದವ ಸೈನ್ಯವು ನಮ್ಮನ್ನಿದಿರಿಸಿ ಬಾಳುವುದೆಂದರೇನು? ಇಂದಿಗೆ ಮಥುರೆಯ ವೈಭವವೂ, ಆ ಬಲರಾಮ ಕೃಷ್ಣರ ಗರ್ವವೂ, ಆ ಯಾದವ ಕುಲವೂ ಮಣ್ಣುಪಾಲಾ ದಂತೆಯೇ ಸರಿ. ರುಕ್ಮಿಕುಮಾರಾ, ಸಾಲ್ವರಾಜಾ, ಬನ್ನಿ ಮುಂದೆ ಹೋಗಿ ಸಮರವನ್ನುಪಕ್ರಮಿಸುವ.

**ರುಕ್ಮಿ**—ಇದೋ ಸಿದ್ಧರಾಗಿರುವೆವು. ಆ ದುರ್ಮದಾಂಧನಾದ ಕೃಷ್ಣನನ್ನು ಹಿಡಿದು ಛಿದ್ರಛಿದ್ರಗಳಾಗಿ ಕತ್ತರಿಸಿ, ಆ ಯಾದವ ಸೈನ್ಯವನ್ನು ನನ್ನ ಶರಾಹತಿಗಳಿಂದ ಉರಿಸಿ ಭಸ್ಮಮಾಡುವೆನು ಬನ್ನಿ. (**ಹೋಗುವರು**).

## ದೃಶ್ಯ ೬.—ಮಥುರಾಪುರದ ಕೋಟೆಯ ಬಾಗಿಲು

(**ಧನುರ್ಧಾರಿಗಳಾಗಿ ಬಲರಾಮನೂ ಕೃಷ್ಣನೂ ಮಾತನಾಡುತ್ತ ಪ್ರವೇಶಿಸುವರು.**) **೧೬**

**ಕೃಷ್ಣ**—ಅಣ್ಣಾ! ಅದೋ! ನೋಡಿದೆಯಾ? ನಾರದರು ಹೇಳಿದಂತೆ ಜರಾಸಂಧಾದಿಗಳ ಸೈನ್ಯವು ಎಷ್ಟು ರಭಸದಿಂದ ಬರುತ್ತಿರುವುದು!

ತುಂಗತುರಂಗಗಳೆಂಬ ತರಂಗಗಳಿಂದಲೂ, ಮಹಾದ್ವಿಪಗಳೆಂಬ ದ್ವೀಪಗಳಿಂದಲೂ, ರಥಗಳೆಂಬ ಹಡಗುಗಳಿಂದಲೂ, ಪದಾತಿಗಳೆಂಬ ನಕ್ರ ತಿಮಿಂಗಿಲಗಳಿಂದಲೂ, ವೀರಾರ್ಭಟಗಳೆಂಬ ಮಹಾಘೋಷ ದಿಂದಲೂ, ಅಪಾರಸಾಗರವೆಂಬಂತೆ ಉಕ್ಕಿ ಮುಂದೆ ಮುಂದೆ ಬರುತ್ತಿರು ವುದು. ಆಹಾ! ಎಂತಹ ಅದ್ಭುತ ಸೈನ್ಯವು!

**ಬಲರಾಮ**—ಕೃಷ್ಣಾ! ಎಷ್ಟು ಪ್ರಾಣಗಳನ್ನು ಆಹುತಿಗೊಟ್ಟರೂ ತೃಪ್ತಿ ಯಾಗದ ಎರಡು ಮೃತ್ಯುದೇವತೆಗಳು ಇಲ್ಲಿರುವುವೆಂಬುದನ್ನು ಅವರು ತಿಳಿದೇ ನಮಗಾಗಿ ಇಂತಹ ಮಹಾಬಲಿಯನ್ನು ತರುತ್ತಿರುವರು.

**ಕೃಷ್ಣ**—ನಿಜ. ಇದು ಸಾಲದಾದರೆ ಆ ಜರಾಸಂಧಾದಿಗಳು ತಮ್ಮ ಶರೀರ ಗಳನ್ನು ಬಲಿಯಾಗಿ ಒಪ್ಪಿಸಲು ಸಿದ್ಧರಾಗಿಯೇ ಬಂದಿರಬೇಕು.

**ಬಲರಾಮ**—ನಿಜ. ಅದೋ! ಅದೋ! ಅವರು ಮುಂದುವರಿದು ಬಂದೇ ಬಿಟ್ಟರು. ಇನ್ನು ಶರಸಂಧಾನ ಮಾಡಲೇಬೇಕು. (ಶರವನ್ನು ಧನುಸ್ಸಿಗೆ ಹೂಡಿ)

**ಕಂ||** ಎಲವೆಲವೊ ದುಷ್ಟಮಾಗಧ|
ಬಲಿಗುಡುತುಂ ನಿನ್ನ ಬಲಮುಮಂ ನಿನ್ನುಮನೀ||
ವಿಲಸಿತ ಮುಸಲಾಯುಧಕಂ|
ಹಲಾಯುಧಕ್ಕಂ ಯಮಾಲಯುವನಾಂ ಪುಗಿಪೆಂ || ೧೬ ||

(ಬಾಣಪ್ರಯೋಗಮಾಡುವನು.) (ಜರಾಸಂಧಾದಿಗಳು ಸೈನ್ಯದೊಡನೆ ಪ್ರವೇಶಿಸುವರು.)

**ಕೃಷ್ಣ—ಕಂ||** ತೊಡುವೆಂ ಶರಸಂತತಿಯಂ|
ಸುಡುವೆಂ ಪ್ರತಿಭಟಪ ನಿಮ್ಮ ಸೈನ್ಯಮನೆಲ್ಲಂ||
ಪಡೆವೆಂ ವಿಜಯಶ್ರೀಯಂ|
ಪೊಡೆಯಿಪೆನಾಶಾಂತದುಲಿವ ಜಯಭೇರಿಯನಾಂ ||೧೭||

(ಬಾಣಪ್ರಯೋಗಮಾಡುವನು.) (ಉಭಯಪಕ್ಷಗಳಿಗೂ ಯುದ್ಧವಾಗುವುದು.)

೧೭

**ಪ್ರಥಮಾಂಕಂ—ಸಂಪೂರ್ಣಂ.**

---

# ದ್ವಿತೀಯಾಂಕಂ

---

## ದೃಶ್ಯ ೧—ಅರಣ್ಯಪ್ರಾಂತ್ಯ

೧ಲ

**ನಾರದ**—ಜರಾಸಂಧ ಶಿಶುಪಾಲಾದಿ ವೀರರು ಶ್ರೀಕೃಷ್ಣ ಬಲರಾಮರಿಂದ ಪದೇಪದೇ ಪರಾಜಿತರಾದರೂ ತಮ್ಮ ಪ್ರಯತ್ನವನ್ನು ಬಿಡದೆ ಮಥುರಾ ನಗರದ ಮೇಲೆ ಹದಿನೆಂಟಾವೃತ್ತಿ ದಂಡೆತ್ತಿ ಹೋಗಿ, ಕಾದಿ, ಮಥುರೆಯ ಪ್ರಜೆಗಳನ್ನು ಬಹಳವಾಗಿ ಬಾಧಿಸಿದರು. ಧನುರ್ಮಹಕ್ಕಾಗಿ ಗೋಕುಲ ದಿಂದ ಹೊರಟುಬಂದ ಶ್ರೀಕೃಷ್ಣ ಬಲರಾಮರನ್ನು ಮತ್ತೆ ಒಂದಾವೃತ್ತಿ ಅಲ್ಲಿಗೆ ಕರೆದುಕೊಂಡು ಹೋಗಬೇಕೆಂದು ನಂದಗೋಪ ಯಶೋದೆ ಯರೂ ಗೋಪ ಗೋಪೀಜನರೂ ಅತ್ಯಂತ ಕುತೂಹಲಭರಿತರಾಗಿ ಎಷ್ಟು ಪ್ರಯತ್ನಪಟ್ಟರೂ ಈ ಸಮರ ಕಾರ್ಯಗಳಿಂದ ಅವರಿಗೆ ವಿರಾಮವೇ ಇಲ್ಲದಿರುವುದು. ಸದಾ ಪ್ರಜಾಸೌಖ್ಯ ತತ್ಪರನಾದ ಶ್ರೀಕೃಷ್ಣ ಪರಮಾತ್ಮನು ತನ್ನ ಪ್ರಜೆಗಳಿಗೆ ಈ ಶತ್ರುಬಾಧೆಯನ್ನು ತಪ್ಪಿಸಿ, ಅವರನ್ನೂ ನಂದವ್ರಜದ ಗೋಪ ಗೋಪೀ ಜನರನ್ನೂ ಸುರಕ್ಷಿತವಾಗಿಡುವುದ ಕ್ಕಾಗಿ, ದೇವಶಿಲ್ಪಿಯಾದ ವಿಶ್ವಕರ್ಮನಿಂದ ಸಮುದ್ರ ಮಧ್ಯದಲ್ಲಿ ದ್ವಾರಕೆಯೆಂಬ ಹೆಸರಿನಿಂದ ರಾಜಧಾನಿಯೊಂದನ್ನು ನಿರ್ಮಿಸಲು ಏರ್ಪಡಿಸಿರುವನು. ಇದರಿಂದ ಆತನ ಪಕ್ಷವಾಗಿ ದೇವೇಂದ್ರನೊಡನೆ ಮಾತನಾಡಿ ನಾನು ಆ ಕಾರ್ಯವನ್ನು ಅನುಕೂಲ ಮಾಡಿದು ದಾಯಿತು. ಈಗ ಜರಾಸಂಧ ಶಿಶುಪಾಲಾದಿಗಳು, ಕೃಷ್ಣನಿಗೆ ವಿಪಕ್ಷದವ ರಾದ ದುರ್ಯೋಧನ ಕರ್ಣ ರುಕ್ಮಿ ಸಾಲ್ವಾದಿಗಳೊಡಗೂಡಿ ಮೂವತ್ತು ಅಕ್ಷೋಹಿಣಿಗಳ ಸೈನ್ಯದೊಡನೆ ಮತ್ತೆ ಯುದ್ಧ ಸನ್ನದ್ಧರಾಗಿ ಹೊರಟಿರು ವರು. ಆದುದರಿಂದ ನಾನೀಗಲೇ ಹೋಗಿ, ಶ್ರೀಕೃಷ್ಣ ಬಲರಾಮರಿಗೆ ಈ ವಿಚಾರವನ್ನು ಮೊದಲೇ ತಿಳಿಸಿ ಅವರನ್ನು ಎಚ್ಚರಿಸುವೆನು.

(ಹೋಗುವನು.)

## ದೃಶ್ಯ ೨—ಪರಶುರಾಮರ ಆಶ್ರಮ

(ಬಲರಾಮ ಕೃಷ್ಣರು ಮಾತನಾಡುತ್ತ ಪ್ರವೇಶಿಸುವರು.)

**ಬಲರಾಮ**—ಕೃಷ್ಣಾ! ನಾವು ನಮ್ಮ ದೇಶವನ್ನೇ ಬಿಟ್ಟು ಹೀಗೆ ಅರಣ್ಯಕ್ಕೆ ಹೊರಟು ಬಂದುದರಿಂದಲಾದರೂ ನಮ್ಮ ಪ್ರಜೆಗಳಿಗೆ ಸದ್ಯಕ್ಕೆ ಆ ಜರಾಸಂಧಾದಿಗಳ ಉಪಟಳವು ತಪ್ಪಬಹುದು. ಆದರೆ ನಾವು ಮುಂದೆ ಎಲ್ಲಿ ಹೋಗುವುದು? ಎಷ್ಟು ದಿನಗಳು ಹೀಗೆ ನೆಲೆಯಿಲ್ಲದೆ ಸಂಚರಿಸುತ್ತಿರುವುದು?

**ಕೃಷ್ಣ**—ಅಣ್ಣಾ! ಅಧರ್ಮಕ್ಕೆ ಪ್ರಾಬಲ್ಯವಿರುವವರೆಗೂ ಧರ್ಮಿಷ್ಠರಿಗೆ ಕಷ್ಟವು ತಪ್ಪಲಾರದು. ಈಗ ನಾವು ಪೂಜ್ಯರಾದ ಪರಶುರಾಮರ ಆಶ್ರಮಕ್ಕೆ ಬಂದಿರುವೆವು. ಅವರಿಗೆ ವಂದಿಸಿ ಅವರ ಆಶೀರ್ವಾದಾನುಗ್ರಹಗಳನ್ನು ಪಡೆದು ನಮ್ಮ ಭವಿಷ್ಯದ್ವಿಚಾರಗಳನ್ನು ಜ್ಞಾನಿಗಳಾದ ಅವರಿಂದ ತಿಳಿದು ಮುಂದೆ ಅವರ ಅಪ್ಪಣೆಯಂತೆ ನಡೆಯೋಣ.

**ಬಲರಾಮ**—ಆಗಬಹುದು. ಇದು ಸರಿಯಾದ ಆಲೋಚನೆ.

(ಮುಂದೆ ಹೋಗಿ ಪರಶುರಾಮರಿಗೆ ನಮಸ್ಕರಿಸುವರು.)

**ಪರಶುರಾಮ**—ವಿಜಯೀಭವ! ವಿಜಯೀಭವ! ಬಲರಾಮ ಕೃಷ್ಣರೇ! ನಿಮಗೆ ಮಂಗಳವಾಗಲಿ. ಇದೇನು? ನೀವಿಬ್ಬರೇ ಹೀಗೆ ಅರಣ್ಯಕ್ಕೆ ಬರಲು ಕಾರಣವೇನು?

**ಕೃಷ್ಣ**—ಪೂಜ್ಯರೇ! ಸರ್ವಜ್ಞರಾದ ತಮಗೆ ತಿಳಿಯದ ಕಾರಣವೇನಿರುವುದು!

|| **ವೃತ್ತ** ||

ಅಳಿಯಂ ಭೂಪತಿ ಕಂಸನೆಮ್ಮ ಬಲದಿಂ ಲೋಕಾಂತರಂ ಸಾರ್ದನೆಂ |
ಬಳಲಿಂದಂ ಖತಿಗೊಂಡು ಸೈನ್ಯಸಹಿತಂ ಬಂದಾ ಜರಾಸಂಧನಂ ||
ದಳವಿಂದಂ ಪದಿನೆಂಟು ಸೂಳ್ ಮಥುರೆಯಂ ಮುತ್ತಿರ್ದನಾಕಾರಣಂ |
ಪೊಳಲಂಬಿಟ್ಟುರೆ ಬಂದೆವಿಂದುಳಿಸಲಾಪೌರರ್ಕಳಂ ಬಾಧೆಯಿಂ || ೧೮ ||

ಅಲ್ಲದೆ ಆ ಶಿಶುಪಾಲನು ಜರಾಸಂಧ ಪ್ರೇರಿತನಾಗಿ ಮತ್ತೆ ನಮ್ಮ ಮೇಲೆ ಯುದ್ಧಸನ್ನಾಹ ಮಾಡುತ್ತಿರುವುದಾಗಿ ತಿಳಿದು, ಪ್ರಜೆಗಳಿಗೆ ಈ ಕಷ್ಟವು ತಪ್ಪಲಿಯೆಂದು ನಾವು ಈ ರೀತಿ ಅರಣ್ಯಕ್ಕೆ ಬಂದಿರುವೆವು.

**ಪರಶುರಾಮ**—ಸಂತೋಷ! ನೀವುಗಳು ಉಚಿತಕಾರ್ಯವನ್ನೇ ಮಾಡಿದಿರಿ. (ಶ್ರೀಕೃಷ್ಣನನ್ನು ನೋಡಿ) ಶ್ರೀಕೃಷ್ಣಪರಮಾತ್ಮಾ! ಸರ್ವಚೈತನ್ಯಸ್ವರೂಪನಾದ ನಿನಗೆ ಗೋಚರವಿಲ್ಲದ ವಿಚಾರವು ಯಾವುದಿರುವುದು! ಆದರೆ ವಿಜಿಗೀಷುಗಳಾದ ನಿಮಗೆ ಶುಭಸೂಚನೆಯನ್ನು ಹೇಳುವುದು ನಮ್ಮ ಕರ್ತವ್ಯವು. ಆದರಿಂದ ಕೇಳು. ಇಲ್ಲಿಗೆ ಸಮೀಪದಲ್ಲಿ ಗೋಮಂತದುರ್ಗವೆಂಬ ಮಹಾಪರ್ವತವಿರುವುದು; ನೀವು ಹೋಗಿ ನಿಮ್ಮ ಪಾದಧೂಳಿಯಿಂದ ಅದನ್ನು ಪವಿತ್ರಗೊಳಿಸಿರಿ. ಅದರ ಶಿಖರದಲ್ಲಿ ದಿವ್ಯಕುಸುಮಭರಿತವಾದ ಕದಂಬವೃಕ್ಷವಿರುವುದು. (ಬಲರಾಮನನ್ನು ನೋಡಿ) ಬಲಭದ್ರನೇ! ಆ ವೃಕ್ಷದಲ್ಲಿರುವ ಮದಿರಾಂಬಿಕೆಯೆಂಬ ದೇವಿಯು ನಿನ್ನನ್ನು ವರಿಸುವಳು. ಅಲ್ಲದೆ ಅಂತರಿಕ್ಷದಿಂದ ದಿವ್ಯನೀಲಾಂಬರವೂ ರತ್ನಕುಂಡಲವೂ ಬಂದು ನಿನ್ನನ್ನು ಸೇರುವುವು. (ಶ್ರೀಕೃಷ್ಣನನ್ನು ನೋಡಿ) ಶ್ರೀಕೃಷ್ಣಾ! ಅಲ್ಲಿಗೆ ಗರುಡನು ಆಕಾಶಮಾರ್ಗದಲ್ಲಿ ಬಂದು ನಿನಗೆ ದಿವ್ಯವಾದ ಮಕರಕುಂಡಲ ವಜ್ರಕಿರೀಟಗಳನ್ನು ಧರಿಸಿ ಹೋಗುವನು; ಮತ್ತು ಲಕ್ಷ್ಮೀದೇವಿಯು ಬಂದು ನಿನ್ನನ್ನು ಸೇರಿ ಆನಂದಿಸುವಳು.

**ರಾಮ ಕೃಷ್ಣರು**—ಪೂಜ್ಯರೇ! ತಮ್ಮ ಶುಭಸೂಚನೆಗಳಿಗಾಗಿ ತಮಗೆ ವಂದಿಸುವೆವು. (ಅಂತರಿಕ್ಷದಲ್ಲಿ ಬೆಳಕಾಗುವುದು).

**ಬಲರಾಮ**—(ಸುತ್ತಲೂ ನೋಡಿ) ಇದೇನು? ಈ ಅದ್ಭುತವಾದ ತೇಜಸ್ಸು?

**ಕೃಷ್ಣ**—ಅದೋ! ಅದು ಅಂತರಿಕ್ಷಮಾರ್ಗದಲ್ಲಿ ವೀಣಾಗಾನ ಮಾಡಿಕೊಂಡು ಬರುತ್ತಿರುವ ನಾರದಮಹರ್ಷಿಗಳ ಶರೀರಕಾಂತಿಯು.

**ನಾರದ**—(ಪ್ರವೇಶಿಸುವನು). *

**ಪರಶುರಾಮ**—ನಮೋ ನಮಃ; ದೇವಮಹರ್ಷಿಗಳಿಗೆ ಸುಖಾಗಮನವೇ?

**ನಾರದ**—ನಮೋ ನಮಃ; ಪರಮಾತ್ಮನ ಕೃಪೆ.

**ರಾಮ ಕೃಷ್ಣರು**—ಮಹಾತ್ಮರಿಗೆ ವಂದಿಸುವೆವು.

**ನಾರದ**—ಓಹೋ ರಾಮ ಕೃಷ್ಣರೇ ವಿಜಯಶಾಲಿಗಳಾಗಿ. ಎಲೈ ಲೋಕಪಾವನಮೂರ್ತಿಗಳಿರಾ! ನಿಮ್ಮ ದರ್ಶನಕ್ಕೆಂದು ಕುತೂಹಲದಿಂದ ಬರುತ್ತಿದ್ದ ನಾನು, ಬ್ರಹ್ಮವಿಷ್ಣುಮಹೇಶ್ವರರನ್ನೇಕಕಾಲದಲ್ಲಿ ಸಂದರ್ಶನ

ಮಾಡಿದಂತೆ, ಮಹನೀಯರಾದ ಪರಶುರಾಮರೊಡಗೂಡಿದ ನಿಮ್ಮನ್ನು ನೋಡಿ ಪರಮಾನಂದವನ್ನು ಪಡೆದೆನು.

**ಬಲರಾಮ**—ಪೂಜ್ಯರೇ ! ತಾವು ನಮ್ಮನ್ನು ನೋಡಲು ಕುತೂಹಲದಿಂದ ಬಂದಂತೆ ಅಪ್ಪಣೆಕೊಡಿಸಿದಿರಲ್ಲವೇ ? ವಿಶೇಷ ಸಮಾಚಾರವೇನು ?

**ನಾರದ**— || ವೃತ್ತ ||

ಬರುತಿರ್ಪಂ ಮಾಗಧೇಶಂ ಪ್ರಬಲತರಮಹಾಘೋರಸೇನಾ ಪರೀತಂ |
ಧುರಧೀರಂ ಚೇದಿಭೂಪಾದ್ಯಖಿಳಖಳನೃಪಾಲ ಪ್ರತಾನಪ್ರಯುಕ್ತಂ ||
ಭರದಿಂ ನಿಮ್ಮಿರ್ವರಂ ಸಂಹರಿಸಲೆನುತುಮತ್ಯುತ್ಕಟಾವೇಶಕೋಪಂ |
ಪರುಷಾಟೋಪ ಪ್ರತಾಪಂ ರಿಪುಕುಲಯಮರೂಪಂ ಜರಾಸಂಧಭೂಪಂ

ಆ ಶಿಶುಪಾಲ ಸಾಲ್ವಾದಿಗಳೊಡಗೂಡಿ ಜರಾಸಂಧನು ನಿಮ್ಮೊಡನೆ ಯುದ್ಧಮಾಡಲು ಅಟ್ಟಹಾಸದಿಂದ ಮತ್ತೆ ಬರುತ್ತಿರುವನೆಂಬ ವಾರ್ತೆಯನ್ನು ತಿಳಿಸಲು ನಾನು ಆತುರನಾಗಿ ಬಂದೆನು.

**ಕೃಷ್ಣ**—ಪೂಜ್ಯರೇ, ಆ ಜರಾಸಂಧಾದಿಗಳು ಈವರೆಗೆ ಹದಿನೆಂಟಾವೃತ್ತಿ ನಮ್ಮನ್ನು ಕೆಣಕಿ ವಿಫಲರಾಗಿ ಓಡಿದರು. ಇನ್ನೂ ಅವರು ತಮ್ಮ ಪ್ರಯತ್ನವನ್ನು ಬಿಡಲೇ ಇಲ್ಲವಲ್ಲಾ ! ಅವರೆಂತಹ ಸ್ಥಿರ ಸಂಕಲ್ಪರು!

**ನಾರದ**—ಅವರ ಸಂಕಲ್ಪವು ಎಷ್ಟು ಸ್ಥಿರವಾದರೂ ಸತ್ಯಧರ್ಮ ಮೂರ್ತಿಗಳಾದ ನಿಮ್ಮಮೇಲೆ ಅವರ ಪರಾಕ್ರಮವು ನಡೆಯಲಾರದು.

**ಪರಶುರಾಮ**—ನಿಜ. ಆ ಜರಾಸಂಧಾದಿಗಳು ನಿಮ್ಮಿಂದ ಪರಾಜಿತರಾಗಿ ಓಡುವರು. ಅನಂತರ ನೀವು ಪಶ್ಚಿಮಾಭಿಮುಖವಾಗಿ ಹೊರಡಿ. ಅಲ್ಲಿ ಕರವೀರಪುರಾಧೀಶನಾದ ಸೃಗಾಲನೆಂಬೊರ್ವ ರಾಜನು ನಿಮ್ಮನ್ನೆ ದುರಿಸಿ ಕಾದಿ ಮಡಿದುಹೋಗುವನು. ಅವನಲ್ಲಿರುವ ಸೂರ್ಯದತ್ತವಾದ ದಿವ್ಯರಥವೊಂದು ನಿಮ್ಮ ಕೈಸೇರುವುದು. ಆದಕಾರಣ ನೀವು ಮುಂದಿನ ಕಾರ್ಯಗಳಿಗಾಗಿ, ಅದೋ ಅಲ್ಲಿ ಕಾಣುವ ಗೋಮಂತಗಿರಿಯನ್ನು ಕುರಿತು ಪ್ರಯಾಣಮಾಡಿ.

**ಬಲರಾಮ ಕೃಷ್ಣ**—ಮಹಾತ್ಮರ ಅಪ್ಪಣೆಯಂತೆ ಆಗಲಿ. ೧೯

(ವಂದಿಸಿ ಹೋಗುವರು).

**ನಾರದ**—ನಾನೀಗಲೇ ಹೋಗಿ ಆ ಜರಾಸಂಧಾದಿಗಳಿಗೆ ತಕ್ಕಂತೆ ಬೋಧನೆ ಮಾಡಿ, ಅವರನ್ನು ಗೋಮಂತಗಿರಿಗೆ ಕಳುಹಿಸಿ, ಅಲ್ಲಿ ಇವರನ್ನು ಕೆಣಕು ವಂತೆ ಮಾಡುವೆನು. (ಹೋಗುವನು).

## ದೃಶ್ಯ ೩—ಗೋಮಂತಗಿರಿ ಪ್ರಾಂತ್ಯದಲ್ಲಿ ಕೃಷ್ಣ ಬಲರಾಮರ ಪ್ರವೇಶ

**ಬಲರಾಮ**—ಕೃಷ್ಣಾ, ಅದೋ! ಪೂಜ್ಯರಾದ ಭಾರ್ಗವರಾಮರು ಹೇಳಿ ದಂತೆ ಈ ಪರ್ವತಾಗ್ರದಲ್ಲಿ ಅದ್ಭುತವಾದ ಕದಂಬವೃಕ್ಷವು ಕಂಗೊಳಿ ಸುತ್ತಿರುವುದು.

**ಕೃಷ್ಣ**—ನಿಜ! ಆಹಾ! ಸಕಲ ಋತುಧರ್ಮ ಪರಿಶೋಭಿತವಾಗಿ ಈ ಪರ್ವತಪ್ರಾಂತ್ಯವು ಎಷ್ಟು ಮನೋಹರವಾಗಿರುವುದು!

**ಬಲರಾಮ**—ಈ ವೃಕ್ಷದಲ್ಲಿ ನಮ್ಮ ಪರಶುರಾಮರು ಹೇಳಿದ ಮದಿರಾಂಗನೆ ಇರಬಹುದಲ್ಲವೆ?

**ಕೃಷ್ಣ**—ಸಂದೇಹವೇನು? ಇರಲೇ ಬೇಕು. ಅಣ್ಣಾ! ನೀನು ಈ ವೃಕ್ಷ ಚ್ಛಾಯೆಯಲ್ಲಿ ವಿಶ್ರಮಿಸಿಕೋ! ನಾನು ಆ ಸರೋವರದ ಬಳಿಗೆ ಹೋಗಿ ಜಲಪಾನಮಾಡಿ ನಿನಗೂ ಉದಕವನ್ನು ತರುವೆನು.

**ಬಲರಾಮ**—ಹಾಗೆಯೇ ಮಾಡು. (ಕುಳಿತುಕೊಳ್ಳುವನು.)

**ಮದಿರಾಂಗನೆ**—(ಪ್ರವೇಶಿಸಿ ಬಲರಾಮನನ್ನು ನೋಡಿ) ೨೦

**ಕಂ**|| ನವಮೋಹನಾಂಗನೆನಿಸಿ |
ರ್ಪಿವನಂಗದ ಸೊಬಗಿನಂಶಕೋಟಿಯೊಳೊಂದಂ ||
ತವೆ ಕೊಂಡಾ ಸರಸಿಜಸಂ |
ಭವನೆಸಗಿರವೇಳ್ಕುಮಂದು ಮಿಗೆ ಮನ್ಮಥನಂ || ೨೦ ||

ಆಹಾ! ಎಂತಹ ಮನೋಹರಾಕಾರನು! ಈತನು ಯಾರು? ಕೋಮಲಾಂಗನಾದ ಇವನು ಈ ಘೋರಾಟವಿಗೇತಕ್ಕೆ ಬಂದಿರಬಹುದು! ರಸಭರಿತವಾದ ಮಾಕಂದವನ್ನು ಸವಿಯಲು ಅರಗಿಣಿಯು ಬಂದಂತೆ ನನ್ನ ಯೌವನವನ್ನು ಸಾರ್ಥಕಗೊಳಿಸಲು ಈತನು ಬಂದಿರಬಹುದೇ!

(ಚಿಂತಿಸಿ) ಆಹಾ! ಹಾಗೆಯೇ ಸರಿ! ಅಪ್ರಾರ್ಥಿತವಾಗಿ ಈ ಪುರುಷ ರತ್ನವು ಈ ಘೋರಾಟವಿಯಲ್ಲಿ ನನಗೆ ಗೋಚರವಾಗಿರುವುದನ್ನು ನೋಡಿದರೆ, ದೈವವು ನನ್ನನ್ನನುಗ್ರಹಿಸಲು ಈತನನ್ನಿಲ್ಲಿಗೆ ಕಳುಹಿಸಿರಬೇಕೆಂದೇ ತೋರುವುದು.

**ಬಲರಾಮ**—(ಮದಿರೆಯನ್ನು ನೋಡಿ ಆಶ್ಚರ್ಯದಿಂದ) ಇದು, ನೋಡಿ ಆನಂದಿಸ ತಕ್ಕ ರೂಪವೇ ಸರಿ! ಎಂತಹ ಮನೋಹರಾಕಾರವು! ಆ ಭಾರ್ಗವ ರಾಮರು ಹೇಳಿದ ಮದಿರಾಂಗನೆಯು ಈಕೆಯೇ ಇರಬಹುದೇ? ೨೧ (ಚೆನ್ನಾಗಿ ನೋಡಿ) ಓಹೋ ಸಂದೇಹವೇನು!

**ಕಂ**|| ನಲ್ಲೆಯಿವಳ್ ಮದಿರಾವಧು |
ವಲ್ಲದಿರಲ್ ಭುವನಮೋಹನೈಕ ಸುಗಂಧಂ ||
ಫುಲ್ಲಸುಮ ಮಂದಹಾಸಂ |
ಸಲ್ಲಲಿತಮದೇಭಗಮನಮೊಲ್ಲಿಯುವಿವಳೊಳ್ ||೨೧||

ಮಹಾತ್ಮರಾದ ಪರಶುರಾಮರ ವಚನವು ಸುಳ್ಳಾಗತಕ್ಕುದಲ್ಲ! ಆದುದರಿಂದಲೇ ನಿಶ್ಚಲಚಿತ್ತನಾಗಿದ್ದ ನನಗೂ ಈ ರಮಣಿಯನ್ನು ನೋಡಿ ಈಕೆಯ ವಿಲಾಸದಲ್ಲಿ ಮನಸ್ಸು ಕುತೂಹಲಪಡುತ್ತಿರುವುದು. ಇನ್ನು ನಾನು ಈಕೆಯನ್ನು ಮಾತನಾಡಿಸುವುದರಲ್ಲಿ ದೋಷವೇನು? (ಬಳಿಗೆ ಬಂದು) ಮನೋಹರೇ! ಪೂಜ್ಯರಾದ ಪರಶುರಾಮರು ನಿನ್ನ ವೃತ್ತಾಂತವನ್ನು ನನಗೆ ಮೊದಲೇ ತಿಳಿಸಿದ್ದರು. ಅದರಂತೆ ನಾನು ನಿನ್ನಾಗಮನ ನಿರೀಕ್ಷಣೆಯಿಂದಿದ್ದೆನು. ಈಗಲಾದರೋ,

**ಕಂ**|| ಪರಮಾನಂದ ಕುತೂಹಲ |
ಭರಿತಂ ನಾನಾದೆನಿಂದು ನೋಡುತೆ ನಿನ್ನೀ ||
ವರಲೋಕತ್ರಯ ಮೋಹಾ |
ಕರ ರೂಪವನಂಗಜಾತ ಮೋಹಿನಿ ರಮಣೀ ||೨೨||

**ಮದಿರೆ**—(ಆತ್ಮ) ಆಹಾ! ಬಾಯಾರಿಕೆಯಿಂದ ಪರಿತಪಿಸುತ್ತಿದ್ದವಳಿಗೆ ಅಮೃತ ಪ್ರವಾಹವು ದೊರೆತಂತೆ ಈ ಸುಂದರಾಂಗನ ರೂಪ ಲಾವಣ್ಯ ಸೌಭಾಗ್ಯವನ್ನು ನೋಡಿ ಕುತೂಹಲದಿಂದ ತಪಿಸುತ್ತಿದ್ದ ನನಗೆ ಈತನ ಕರುಣಾರಸ ಪ್ರವಾಹವು ಒದಗಿತಲ್ಲವೇ! (ಪ್ರಕಾಶಂ) ಮೋಹನಾಂಗಾ

ಹಾಗಾದರೆ ನಾನು ಯಾರೆಂದರಿತಿರುವೆ?

**ಬಲರಾಮ**—ನೀನು ಕದಂಬವಾಸಿನಿಯಾದ ಮದಿರಾಂಗನೆಯಲ್ಲವೇ?

**ಮದಿರೆ**—ಅಹುದು; ಚೆನ್ನಾಗಿ ಊಹಿಸಿದೆ. ಆದರೆ ನೀನು ಯಾರೆಂಬು ದನ್ನು ನಾನು ತಿಳಿಯಬಹುದೇ?

**ಬಲರಾಮ**—ಎಲೌ ಮನೋಹರೇ,

**ಕಂ**|| ಮಧುರಾಲೋಕನದಿಂದಂ |
ಮದನಾಸ್ತ್ರಂಗಳನೆ ಬೀರ್ವ ನಿನ್ನಾಕೃತಿಯಿಂ ||
೨೨ ಮುದವಾಂತು ಮೋಹಗೊಂಡಿಹ |
ಯದುಸುತ ಬಲಭದ್ರನೆಂದು ತಿಳಿದಪುದೆನ್ನಂ || ೨೪ ||

ನಾನು ವಸುದೇವನ ಜ್ಯೇಷ್ಠಕುಮಾರನು, ನನ್ನನ್ನು ಬಲರಾಮ ನೆಂತಲೂ ಕರೆಯುವರು.

**ಮದಿರೆ**—(ಸಂತೋಷದಿಂದ ಆತ್ಮಗತ) ಇದು ನಿಜವಿರಬಹುದೇ? (ಪ್ರಕಾಶಂ) ಹಾಗಾದರೆ ಯಾದವವಂಶ ಸಂಭವನಾದ ಬಲಭದ್ರ ಕುಮಾರನು ನೀನೇನೇ! ಬಹಳ ಸಂತೋಷ! ಬಲಭದ್ರದೇವಾ, ರಾಜಕುಮಾರನಾಗಿ ನೀನು ಹೀಗೆ ಒಂಟಿಯಾಗಿ ಈ ಘೋರಾರಣ್ಯಕ್ಕೆ ಬರಲು ಕಾರಣವೇನು?

**ಬಲರಾಮ**—ಎಲೌ ಕೋಮಲಾಂಗೀ, ಪದೇಪದೇ ನಮ್ಮ ಮಧುರಾ ನಗರದ ಮೇಲೆ ದಂಡೆತ್ತಿಬಂದು ನಮ್ಮ ಪ್ರಜೆಗಳನ್ನು ಬಾಧಿಸುತ್ತಿದ್ದ ಆ ಜರಾಸಂಧಾದಿ ರಾಕ್ಷಸರ ಮೇಲಣ ಕಾರ್ಯಭಾಗಕ್ಕಾಗಿ ನಾನೂ ನನ್ನ ಅನುಜನಾದ ಶ್ರೀ ಕೃಷ್ಣನೂ ಈ ಪ್ರಾಂತ್ಯಕ್ಕೆ ಬಂದೆವು. ಅವನು ಸರೋವರಕ್ಕೆ ಜಲಪಾನ ಮಾಡಲು ಹೋಗಿರುವನು.

**ಮದಿರೆ**—ಸಂತೋಷ, ಮೋಹನಾಂಗಾ, "ಯದುಕುಮಾರನಾದ ಬಲ ಭದ್ರನು ನಿನ್ನನ್ನು ಅನುಗ್ರಹಿಸಿ ವರಿಸುವನು" ಎಂದು ಪೂಜ್ಯರಾದ ಪರಶುರಾಮರೇ ಹಿಂದೆ ನನಗೂ ಹೇಳಿದ್ದರು. ಅದು ಮೊದಲಾಗಿ ನಾನು ನನ್ನ ಮನೋವಲ್ಲಭನ ಆಗಮನವನ್ನು ಅತಿ ಕುತೂಹಲದಿಂದ ನಿರೀಕ್ಷಿಸಿಕೊಂಡಿದ್ದೆನು. ಈಗಲಾದರೋ!

**ಕಂ||** ಸೌಂದರ್ಯತೇಜದಿಂ ಸೆಳೆ |
ದಿಂದೆನ್ನಯ ಮನವ ನೋಲವ ಬೀರುವ ನಿನ್ನೊಳ್ ||
ಸಂದಿರೆ ಹೃದಯಂ ಪರವಾ |
ನಂದದೆ ವರಿಸಿರ್ಪೆನಿಂದು ನಿನ್ನಂ ರಮಣಾ ||೨೪||

ನಿನ್ನ ಕೃಪಾನುಗ್ರಹಗಳಿಂದ ನಾನು ಧನ್ಯಳಾದೆನು. ೨೩

(ಬಲರಾಮನಿಗೆ ಸುಮಮಾಲಿಕೆಯನ್ನು ಹಾಕುವಳು. ಆಕಾಶದಿಂದ ನೀಲಾಂಬರವೂ ರತ್ನಕುಂಡಲವೂ ಬಂದು ಬಲರಾಮನ ಕೈಗೆ ಬೀಳುವುವು.)

**ಬಲರಾಮ**—(ಸಂತೋಷದಿಂದ) ಮನೋಹರೇ! ಈ ವಿಚಿತ್ರವನ್ನು ನೋಡಿದೆಯಾ! ಅಂತರಿಕ್ಷದಿಂದ ನೀಲಾಂಬರ ಕುಂಡಲಗಳು ಬಂದಿರುವುವು.

**ಕಂ||** ವರಿಸಿದ ತರುಣಿಯೆ ಜಗದೊಳ್ |
ಪುರುಷನ ಪುರುಷಾರ್ಥ ಭಾಗ್ಯದೇವತೆಯೆಂಬಾ ||
ಪಿರಿಯರ ನುಡಿ ದಿಟವಾದುದು |
ವರಸತಿ ಬರೆ ಕುಂಡಲಾಂಬರಂಗಳನಾಂತೆಂ ||೨೫||

ಇದು ನಿನ್ನ ಕೈವಿಡಿದುದರ ಫಲವು.

**ಕೃಷ್ಣ**—(ಪ್ರವೇಶಿಸಿ ನೋಡಿ ಸಂತೋಷಾಶ್ಚರ್ಯಗಳಿಂದ ಆತ್ಮಗತ) ಓಹೋ! ಇಲ್ಲಿ ಆಗಲೇ ಅಣ್ಣನು ಏನೋನೋ ಅನುಕೂಲಗಳನ್ನು ಮಾಡಿಕೊಂಡಿರುವನು. (ಪ್ರಕಾಶ) ಅಣ್ಣಾ! ಈಕೆಯೇ ಪೂಜ್ಯರಾದ ಪರಶುರಾಮರು ಹೇಳಿದ ನಮ್ಮ ಅತ್ತಿಗೆಯಲ್ಲವೇ? ಬಹಳ ಸಂತೋಷ. ಇನ್ನು ನೀವು ನಿಮ್ಮ ಕದಂಬವೃಕ್ಷದ ನೆರಳಿನಲ್ಲಿ ವಿಶ್ರಮಿಸಿಕೊಳ್ಳಿ! ನಾನು ಈ ಅಶ್ವತ್ಥ ವೃಕ್ಷದ ಮೂಲದಲ್ಲಿ ವಿಶ್ರಾಂತಿಯನ್ನು ಹೊಂದುವೆನು. (ಕುಳಿತುಕೊಳ್ಳುವನು.) (ಗರುಡನು ಕಿರೀಟಕುಂಡಲಗಳನ್ನು ತಂದು ಕೃಷ್ಣನಿಗೆ ಧರಿಸುವನು. ಲಕ್ಷ್ಮೀದೇವಿಯು ಮೇಲಿನಿಂದ ಬಂದು ಶ್ರೀಕೃಷ್ಣನಿಗೆ ಸುಮಮಾಲಿಕೆಯನ್ನು ಹಾಕುವಳು.)

**ಲಕ್ಷ್ಮೀ**—**ಕಂ||** ಹೀರಕಕಿರೀಟಮನೋಜ್ಞಾ |
ಕಾರಾ ಘನಮಕರಕುಂಡಲಾಲಂಕಾರಾ ||
೨೪ ನಾರಾಯಣ ಭುವನೈಕಾ |
ಧಾರಾ ಕಮಲಾಮನಸ್ಸರೋಜವಿಹಾರಾ || ೨೬ ||

**ಕೃಷ್ಣ**—ಇಂದಿರಾದೇವಿಯೇ, ನಿನ್ನಾಗಮನದಿಂದ ಬಹಳ ಸಂತೋಷ ವಾಯಿತು. ನೀನು ಈ ರೀತಿ ಭೂಲೋಕಕ್ಕೆ ಅವತರಿಸಲು ಕಾರಣವೇನು ?

**ಲಕ್ಷ್ಮಿ**—ಪರಮಾತ್ಮಾ ! ಕ್ಷೀರಸಾಗರಶಯನನಾಗಿದ್ದ ನಿನ್ನ ವಜ್ರಕಿರೀಟ ಕುಂಡಲಗಳನ್ನು ಅಪಹರಿಸಿದ್ದ ಪ್ರಹ್ಲಾದಪುತ್ರನಾದ ವಿರೋಚನನನ್ನು ಹುಡುಕಿ, ಗರುಡನು, ಪಾತಾಳಲೋಕದಲ್ಲಿದ್ದ ಅವನನ್ನು ಶಿಕ್ಷಿಸಿ, ಈ ಕಿರೀಟಕುಂಡಲಗಳನ್ನು ತೆಗೆದುಕೊಂಡು ಕ್ಷೀರಸಮುದ್ರವನ್ನು ಕುರಿತು ವೇಗವಾಗಿ ಹೋಗುತ್ತಿದ್ದನು. ಪರಮಾತ್ಮನಾದ ನೀನು ಈ ಮಧ್ಯ ಮಾರ್ಗದಲ್ಲಿಯೇ ಮಾನವಾಕಾರದಿಂದ ಗೋಚರನಾದ ಕಾರಣ, ವೈನತೇಯನು ಈ ಕಿರೀಟಕುಂಡಲಗಳನ್ನು ತಂದು ನಿನಗಲಂಕರಿಸಿದನು. ಈ ಕಿರೀಟಧಾರಣ ಮಹೋತ್ಸವವನ್ನು ನೋಡಿ ಬ್ರಹ್ಮಾದಿ ದೇವತೆಗಳು ವಿಮಾನಗಳಲ್ಲಿ ಕುಳಿತು ಜಯಘೋಷದಿಂದಾನಂದಪಡುತ್ತಿರುವರು. ನಾನು ಮಾತ್ರ ನಿನ್ನ ಸಂದರ್ಶನಕ್ಕೆಂದು ಬಂದೆನು.

**ಕೃಷ್ಣ**—ಬಹಳ ಸಂತೋಷ.

**ಬಲರಾಮ**—ಕೃಷ್ಣಾ, ಪೂಜ್ಯರಾದ ಪರಶುರಾಮರ ಆಶೀರ್ವಾದವು ನಿನಗೂ ಫಲಿಸಿತಲ್ಲವೇ ! ಈಗ ನನಗೆ ಬಹಳ ಸಂತೋಷವಾಯಿತು. (ಎಲ್ಲರೂ ಗುಡ್ಡದ ಮೇಲೆ ಹತ್ತಿ ನೋಡುತ್ತಿರುವರು.) ಅದೋ ! ಅದೋ ! ಕೃಷ್ಣಾ ಆ ಕಡೆ ನೋಡು ! ಅದ್ಭುತವಾದ ಸೈನ್ಯವು ಕೋಲಾಹಲದಿಂದಿತ್ತಲೇ ಬರುತ್ತಿರುವುದು !

**ಕೃಷ್ಣ**—ಇದು ನಾರದರು ಹೇಳಿದ ಜರಾಸಂಧಾದಿಗಳ ಸೈನ್ಯವು. ಇನ್ನು ಈ ನಮ್ಮ ಕಾಂತೆಯರು ಅದೃಶ್ಯರಾಗಲಿ. ನಾವು ಆ ಶತ್ರುಸೈನ್ಯದಲ್ಲಿ ನುಗ್ಗಿ ಯುದ್ಧಮಾಡುವ.

**ಬಲರಾಮ**—ಹಾಗೆಯೇ ಆಗಲಿ. (ಮದಿರಾಲಕ್ಷ್ಮಿಯರು ಅಂತರ್ಧಾನವಾಗುವರು)

(ಜರಾಸಂಧಾದಿಗಳು ಪ್ರವೇಶಿಸುವರು).

**ಜರಾಸಂಧ**—ಶಿಶುಪಾಲಭೂಪಾಲಾ !

**ವೃ||** ಇದನೋಡಿತ್ತಲಿ ನೋಡುನೋಡುಗಿರಿಯಗ್ರಸ್ಥಾನದೊಳ್‌ಕಾಂಬರು |
ನ್ಮದದಿಂದಂ ಬಲರಾಮಕೃಷ್ಣರಥಮರ್ ಸ್ವಪ್ರಾಣರಕ್ಷಾತುರರ್ ||
ಬೆದರುತ್ತೀಪರಿ ಬಂದು ನಿಂದರಿವರಂ ಸುಟ್ಟೀಗಳಾಭಸ್ಮಮಂ |
ಮುದದಿಂ ಫಾಲದೊಳಿಟ್ಟು ಸಾರ್ವಪುರಮಂ ನಿಶ್ಚಿಂತೆಯಿಂ ಶಾಂತಿಯಿಂ||

ಶಿಶುಪಾಲ ರುಕ್ಮಿಸಾಲ್ವಾದಿಗಳೇ! ನೋಡಿದಿರೋ! ನಾರದರು ಹೇಳಿದಂತೆ ನೀಚರಿಬ್ಬರೂ ಒಂದೇಕಡೆ ಸಿಕ್ಕಿರುವರು. ಸಹಾಯಹೀನರಾದಿವರನ್ನಾಹುತಿದೆಗೆದುಕೊಳ್ಳಲು ಇದೇ ತಕ್ಕ ಸಮಯವಲ್ಲವೇ?

**ಶಿಶುಪಾಲ**—ನಿಜ! ನಿಜ!! **||ವೃತ್ತ||**

ನಗಮಂ ಮುತ್ತುತುಮೆತ್ತಲುಂ ತರುಲತಾವ್ರಾತಕ್ಕಿಡುತ್ತಗ್ನಿಯಂ |
ಪೊಗೆಯುಂಜ್ವಾಲೆಯುಮೇರಿಭುಗ್‌ಭುಗಿಲೆನಲ್‌ನಾನಾಸ್ಫುಲಿಂಗೋತ್ಕರಂ|
ಗಗನಂ ಮುಟ್ಟಿರೆ ಚಂದ್ರಸೂರ್ಯರದರಿಂ ನಿಸ್ತೇಜರಾಗುತ್ತಿರಲ್ |
ಜಗಮೇ ತಲ್ಲಣಿಪಂತೆ ಮಾಡಿಸುಡುವೆಂ ನಾಂ ಕೃಷ್ಣನಂ ರಾಮನಂ ||೨೮||

ಈ ಪ್ರಪಂಚವೆಲ್ಲವೂ ಆದಿರಿ ಬೆದರಿ ಅಲ್ಲೋಲಕಲ್ಲೋಲವಾಗುವಂತೆ ಮಾಡಿ ಈ ದುಷ್ಟರಿಬ್ಬರನ್ನೂ ಕಾಡುಗಿಚ್ಚಿಗೆ ಬೀಳುವ ಪತಂಗಗಳಂತೆ ಒಂದು ನಿಮಿಷಮಾತ್ರದಲ್ಲಿ ಭಸ್ಮಮಾಡಿಬಿಡುವ ಬನ್ನಿ. ಈ ಪರ್ವತದ ಸುತ್ತಲೂ ಮುತ್ತಿ ಬೆಂಕಿಯನ್ನು ಹಚ್ಚಿಬಿಡುವ. ಭ್ರಷ್ಟರು ಹೇಗೆ ತಪ್ಪಿಸಿಕೊಳ್ಳುವರೋ ನೋಡೋಣ.

**ಜರಾಸಂಧ**—ಶಿಶುಪಾಲಭೂಪಾಲಾ! ಭಲಾ! ಒಳ್ಳೆಯ ಆಲೋಚನೆಯನ್ನೇ ಮಾಡಿದೆ. ಬಹಳ ಸಂತೋಷ! ಬನ್ನಿ, ಬೆಂಕಿಯನ್ನು ಹಚ್ಚುವ. (ಎಲ್ಲರೂ ಹೋಗಿ ಬೆಟ್ಟದಸುತ್ತಲೂ ಬೆಂಕಿಯನ್ನು ಹಚ್ಚುವರು). ೨೫

**ಕೃಷ್ಣ**—(ಸುತ್ತಲೂ ನೋಡಿ) ಓಹೋ! ಅಣ್ಣಾ! ಅಣ್ಣಾ! ಅಲ್ಲಿನೋಡು! ಅಲ್ಲಿನೋಡು! ಆ ಶಿಶುಪಾಲ ಜರಾಸಂಧಾದಿಗಳು ಬಂದು ಈ ಪರ್ವತಕ್ಕೆ ಸುತ್ತಲೂ ಬೆಂಕಿಯನ್ನು ಹಚ್ಚಿರುವರು. ಇನ್ನು ನಾವಿವರನ್ನು ವಿಚಾರಿಸಿಕೊಳ್ಳಬೇಕು.

**ಬಲರಾಮ**—ಅಹುದು; ಬಾ ಈ ಕಡೆಯಿಂದ ಸೈನ್ಯದಲ್ಲಿ ನುಗ್ಗುವ. (ಕೃಷ್ಣ ಬಲರಾಮರು ಬೆಟ್ಟದಿಂದ ಧುಮ್ಮಿಕ್ಕುವರು.)

**ಬಲರಾಮ—ಕಂ||** ಅಧಮನೃಪಾಲರೆ ನಿಮ್ಮಂ |
ವಿಧವಿಧ ದಿವ್ಯಾಸ್ತ್ರತತಿಯನೆಡೆವಿಡದೆಚ್ಚಾಂ ||
೨೬ ವಧಿಸುತೆ ಭೂತಾವಳಿಗ |
ತ್ಯಧಿಕಾನಂದವನೆ ಗೈದು ಶಾಂತಿಯನಾಂಪೆಂ ||೨೯||

(ಸೈನ್ಯವನ್ನು ಹೊಡೆದು ಕೆಡಹುವನು.)

**ಜರಾಸಂಧ—ಕಂ||** ಕೆಡುಗರೆ ನಿಮ್ಮಿರ್ವರುಮಂ |
ಪಿಡಿಯುತೆ ಹಣಿಹಣಿದು ಬಿಡಗನಡಗಿಸಿ ಪೊಡೆಯಂ ||
ಕಡಿವೆಂ ಸುಡುವೆಂ ಮುದವಂ |
ಪಡೆವೆಂ ಧಂಧಂಧಳೆಂದು ಭೇರಿಯ ಪೊಡೆವೆಂ ||೩೦||

(ಹೊಡೆದಾಡುವರು.)

**ಕೃಷ್ಣ— ಕಂ||** ಅಚ್ಚರಿಯ ಮೋಹನಾಸ್ತ್ರವ |
ನೆಚ್ಚೆನಿದೋ ದುಷ್ಟನೃಪರೆ ನಿಮ್ಮಯ ಪಡೆಯಂ ||
ಕಿಚ್ಚಿನೊಳುರಿಸುವೆ ನಿಂದಾಂ |
ಸ್ವಚ್ಛಂದದೆ ನೀಮೆ ಕಡಿದು ಮಡಿದಪಿರೀಗಳ್ ||೨೯||

(ಅಸ್ತ್ರವನ್ನು ಪ್ರಯೋಗಿಸುವನು.)

(ಜರಾಸಂಧ ಶಿಶುಪಾಲಾದಿಗಳು ಒಬ್ಬರ ಕಣ್ಣಿಗೊಬ್ಬರು ಕೃಷ್ಣ ಬಲರಾಮರಂತೆ ಕಂಡು ಪರಸ್ಪರ ಹೊಡೆದಾಡುವರು.)

**ಕೃಷ್ಣ**—ಅಣ್ಣಾ! ಇವರ ಮೇಲೆ ಮೋಹನಾಸ್ತ್ರವನ್ನು ಪ್ರಯೋಗಿಸಿರುವೆನು. ಅಲ್ಲಿ ನೋಡು, ಅವರಲ್ಲೇ ಒಬ್ಬರಿಗೊಬ್ಬರು ಕೃಷ್ಣ ಬಲರಾಮರಂತೆ ಕಂಡು, ಹುಚ್ಚರಂತೆ ಅವರವರಲ್ಲಿಯೇ ಪರಸ್ಪರ ಹೊಡೆದಾಡಿ ಬೀಳುತ್ತಿರುವರು!

**ಬಲರಾಮ**—ಓಹೋ ಬಹಳ ವಿನೋದವಾಗಿರುವುದು. ಅಲ್ಲಿ ನೋಡು. ಇವರ ಸೈನ್ಯವೆಲ್ಲವೂ ನಾಶವಾಯಿತು. ಇತ್ತನೋಡು. ಇವರ ಮಧ್ಯದಲ್ಲಿ ದುರ್ಯೋಧನ ಕರ್ಣಾದಿಗಳು ಸಹ ಇರುವರು.

**ಕೃಷ್ಣ**—ನಿಜ! ಇವರೆಲ್ಲರೂ ಮಹಾದುಷ್ಟರು. ಇವರನ್ನು ಸುಮ್ಮನೆ

ಬಿಡತಕ್ಕುದಲ್ಲ. ನಾರಾಯಣಾಸ್ತ್ರವನ್ನು ಪ್ರಯೋಗಿಸಿ ಇವರೆಲ್ಲರನ್ನೂ ಈಗಲೆ ಧ್ವಂಸಮಾಡುವೆನು. (ನಾರಾಯಣಾಸ್ತ್ರವನ್ನು ಸಂಧಾನ ಮಾಡುವನು.)

**ಆಕಾಶದಲ್ಲಿ**—ಕೃಷ್ಣಪರಮಾತ್ಮನೇ! ನಿಲ್ಲು! ನಿಲ್ಲು! ಇದರಿಂದ ಮುಂದಿನ ಭಾರತಯುದ್ಧವು ಕೆಡುವುದು. ಅದರಿಂದ ನಾರಾಯಣಾಸ್ತ್ರವನ್ನು ಉಪಸಂಹರಿಸು.

**ಕೃಷ್ಣ**—ಓಹೋ! ಅಶರೀರವಾಣಿಯು! ನಿಜ! ನಿಜ! ಮುಂದಿನ ಭಾರತ ಯುದ್ಧವು ಕೆಡಕೂಡದು. ಅಸ್ತ್ರವನ್ನು ಸಂಧಾನಮಾಡಿಬಿಟ್ಟೆನಲ್ಲಾ! ಇರಲಿ; ಎಲೈ ನಾರಾಯಣಾಸ್ತ್ರವೇ! ನೀನು ಇವರ ಶಿರಸ್ಸುಗಳಿಗೆ ಪ್ರತಿ ಯಾಗಿ ಇವರ ಶಿರೋಭೂಷಣಗಳನ್ನು ತೆಗೆದುಕೊಂಡು ಹೋಗು. (ಜರಾಸಂಧಾದಿಗಳ ಕಿರೀಟಗಳು ಹಾರಿಹೋಗುವುವು.) ಅಣ್ಣಾ! ನಮ್ಮ ಕಾರ್ಯ ವಾಯಿತಷ್ಟೆ! ಇನ್ನು ಪೂಜ್ಯರಾದ ಪರಶುರಾಮರು ಹೇಳಿದಂತೆ ಕರವೀರಪುರವನ್ನು ಕುರಿತು ಪ್ರಯಾಣ ಮಾಡೋಣ. ಬಾ!

**ಬಲರಾಮ**—ಹಾಗೆಯೇ ಆಗಲಿ. ನಡೆ. (ಹೋಗುವರು.)

**ನಾರದ**—(ಪ್ರವೇಶಿಸಿ ನೋಡಿ ಆತ್ಮಗತ) ಆಹಾ! ನನ್ನ ಕಾರ್ಯವು ಫಲಿಸಿತು. ಯಾರ ಯಾರಿಗೆ ಏನೇನು ಆಗಬೇಕೋ ಅವರವರ ಯೋಗ್ಯತೆಗೆ ತಕ್ಕಂತೆ ಫಲವಾಯಿತು. (ಮುಂದೆ ಹೋಗಿ) ಜರಾಸಂಧಾ! ಶಿಶುಪಾಲಾ! ಸಾಲ್ವಾ! ರುಕ್ಮೀ! ಏನಿದು? ಹೀಗೆ ಮುಗ್ಧರಾಗಿ ನಿಂತಿರುವಿರಿ?

**ಜರಾಸಂಧಾದಿಗಳು**— (ಜ್ಞಾನಬಂದಮೇಲೆ ಕಿರೀಟಗಳನ್ನು ನೋಡಿಕೊಂಡು ಆಶ್ಚರ್ಯ ವ್ಯಸನಗಳಿಂದ ನಿಲ್ಲುವರು.)

**ನಾರದ**—ಜರಾಸಂಧಭೂಪಾಲಾ! ನೀವು ಯತ್ನಿಸಿದ ಕಾರ್ಯವು ಪೂರ ಯಿಸಿತೇನು? ಕೃಷ್ಣ ಬಲರಾಮರೊಡನೆ ಯುದ್ಧಮಾಡಿದಿರೇನು?

**ಜರಾಸಂಧ**—ಪೂಜ್ಯರೇ, ಮಾಡಿದರೇನು ಫಲ! ಅವರು ಮಹಾ ಪರಾಕ್ರಮಿಗಳು.

**ನಾರದ**—ಛಿ! ಛೀ! ಮಹಾವೀರರಾದ ನಿಮ್ಮ ಮುಂದೆ ಆ ಗೋಪಾಲರ ಪರಾಕ್ರಮವೇ? ನೀನೆಂದರೇನು? ಶಿಶುಪಾಲನೆಂದರೇನು? ಮಹಾ ಸಾಹಸಿಯಾದ ರುಕ್ಮಿಕುಮಾರನೆಂದರೇನು? ದುರ್ಯೋಧನ ಕರ್ಣಾದಿ

ಗಳೆಂದರೇನು ? ಇಂಥವರ ಮುಂದೆ ಆ ಬಡ ಗೋಪಾಲರೆಂದರೇನು ? ಯಾರು ಯಾರಿಗೆ ಸಾಟಿ! ಏನು ಕಥೆ! ಅದಿರಲಿ. ಒಬ್ಬರ ತಲೆಯ ಮೇಲೆಯೂ ಕಿರೀಟಗಳೇ ಕಾಣುವುದಿಲ್ಲವಲ್ಲಾ !

**ಜರಾಸಂಧ**—ಪೂಜ್ಯರೇ! ನಮ್ಮನ್ನೇತಕ್ಕೆ ಪರಿಹಾಸ್ಯ ಮಾಡುವಿರಿ?

**ಶಿಶುಪಾಲ**—೨೭ ಪೂಜ್ಯರೇ! ನಾವು ಮೋಸಹೋದೆವು. ಆ ಕೃಷ್ಣನ ನಾರಾಯಣಾಸ್ತ್ರದ ಹತಿಯಿಂದ ನಮ್ಮೆಲ್ಲರ ಕಿರೀಟಗಳೂ ಹಾರಿಹೋದುವು.

**ನಾರದ**—ಏನು ಏನು ? ಕಿರೀಟಗಳು ಹಾರಿಹೋದುವೇ ? ಛೀ! ಛೀ! ಅನ್ಯಾಯವಾಯಿತು, ಹೀಗಾಗಬಾರದಾಗಿತ್ತು. (ಆತ್ಮಗತ) ತಲೆಗಳೇ ಹಾರಿಹೋಗಬೇಕಾಗಿತ್ತು.

**ಜರಾಸಂಧ**—ನೀಚರು ಮೋಸ ಮಾಡಿದರು. ಇಂತಹ ಮಾನಹಾನಿಯನ್ನು ನಾವೆಂದಿಗೂ ಅನುಭವಿಸಿರಲಿಲ್ಲ.

**ನಾರದ**—ನಿಜ! ಏನುಮಾಡುವುದು! ಆಗಲಿ. ಇನ್ನುಮುಂದೆ ಮಾತ್ರ ನಿಮಗೆ ಹೀಗೆ ಮಾನಹಾನಿಯಾಗುವುದೇ ಇಲ್ಲ. (ಆತ್ಮ) ಪ್ರಾಣಹಾನಿಯೇ. (ಪ್ರಕಾಶಂ) ನೀವುಗಳು ಇಷ್ಟುಮಂದಿ ವೀರಾಧಿವೀರರಿರುವಲ್ಲಿ ಆ ರಾಮಕೃಷ್ಣರಿಬ್ಬರನ್ನು ಶಿಕ್ಷಿಸಲು ಸಾಧ್ಯವಾಗಲಿಲ್ಲವೇ? ಆಶ್ಚರ್ಯ!

**ಶಿಶುಪಾಲ**—ಆ ನೀಚರು ಮಹಾ ತಂತ್ರಿಗಳು. ಮಾಯಾವಿಗಳು. ಅವರ ಅಸ್ತ್ರಪ್ರಯೋಗದಿಂದ ನಮಗೆ ಬುದ್ಧಿಯೇ ಭ್ರಾಂತಿಯಾಯಿತು. ಎದುರಿಗೆ ನೂರಾರುಮಂದಿ ಕೃಷ್ಣ ಬಲರಾಮರು ಬಂದು ನಮ್ಮನ್ನು ಹೊಡೆಯುತ್ತಿದ್ದಂತೆ ಕಂಡಿತು.

**ಜರಾಸಂಧ**—ಅಹುದಹುದು. ನನಗೂ ಅದೇ ರೀತಿಯಾಯಿತು.

**ರುಕ್ಮಿ**—ನಿಜ! ಅವರು ಮೋಸದಿಂದಲೇ ನಮ್ಮನ್ನು ಗೆದ್ದರಲ್ಲದೆ, ಪರಾಕ್ರಮದಿಂದ ಯುದ್ಧಮಾಡಿದ್ದರೆ, ನಾನೊಬ್ಬನೇ ಅವರಿಬ್ಬರನ್ನೂ ಕಡಿದು ನುಚ್ಚುನುರಿ ಮಾಡುತ್ತಿದ್ದೆನು. ಜರಾಸಂಧಭೂಪಾಲಾ! ಆ ನೀಚ ಕೃಷ್ಣನಿಗೆ ತಕ್ಕ ಅವಮಾನಮಾಡಲು ಈಗ ನನಗೆ ಒಂದು ಸಂಧಿ ದೊರೆತಿರುವುದು.

**ಜರಾಸಂಧ**—ಏನು ರುಕ್ಮೀ ಹೇಳು, ಮೊದಲು ಹೇಳು. ಆ ನೀಚನಿಗೆ ತಕ್ಕುದನ್ನು ಮಾಡುವ.

**ರುಕ್ಮ**—ಕೇಳಿ. ನಮ್ಮ ತಂದೆಯಾದ ಭೀಷ್ಮಕರಾಜನು ನನ್ನ ತಂಗಿಯಾದ ರುಕ್ಮಿಣಿಯನ್ನು ಕೃಷ್ಣನಿಗೆ ಕೊಟ್ಟು ವಿವಾಹಮಾಡಬೇಕೆಂದಿಷ್ಟಪಟ್ಟಿದ್ದನು. ಈ ವಾರ್ತೆಯು ಕೃಷ್ಣನಿಗೂ ತಿಳಿದಿರಬೇಕು. ನಾನು ಆ ವಿವಾಹ ಪ್ರಯತ್ನವನ್ನು ತಪ್ಪಿಸಿ, ರಾಜರ ಪದ್ಧತಿಯಂತೆ ಸ್ವಯಂವರವನ್ನೇರ್ಪಡಿಸುವೆನು. ಸ್ವಯಂವರಕ್ಕೆ ಸ್ತ್ರೀಲೋಲನೂ ಚಪಲನೂ ಆದ ಆ ಗೋಪಾಲನು ಅಟ್ಟಹಾಸದಿಂದ ಬರಲೇ ಬರುವನು. ಆಗ ನೆರದ ರಾಜ ಸಭೆಯಲ್ಲಿ ಅವನು ಮೂರ್ಧಾಭಿಷಿಕ್ತ ರಾಜನಲ್ಲವೆಂದು ತಿರಸ್ಕರಿಸಿ, ಸಭೆಯಿಂದಾಚೆಗೆ ತಳ್ಳಿಸಿದರೆ, ಅವನು ಈಗ ನಮಗೆ ಮಾಡಿದ ಅವಮಾನಕ್ಕೆ ತಕ್ಕ ಪ್ರತೀಕಾರವಾಗುವುದು. ಇದಕ್ಕೇನು ಹೇಳುವಿರಿ?

**ಜರಾಸಂಧ**—ಅಷ್ಟು ಮಾತ್ರವೇ ಸಾಲದು. ರುಕ್ಮಿಣಿಯು ನಮ್ಮ ಶಿಶುಪಾಲನನ್ನು ವರಿಸುವಂತೆ ಏರ್ಪಡಿಸಿದರೆ, ಆಗ ಆ ನೀಚ ಕೃಷ್ಣನ ಕಣ್ಣಿನಲ್ಲಿ ರಕ್ತವು ಬರುವುದು. ಇದರಿಂದ ಅವನು ಕೆರಳಿ ಪ್ರತಿಭಟಿಸುವನು. ಆಗ ಸಹಾಯಹೀನನಾದ ಅವನನ್ನು ನಾವು ಸುಲಭವಾಗಿ ಬಲಿಯಿಕ್ಕಬಹುದು. ಸ್ವಯಂವರಕ್ಕೆ ಬಂದುದಕ್ಕೆ ಅವನಿಗೆ ಸ್ವಯಂವಧೆಯಾಗಿ, ನಮಗೆ ಶತ್ರುಶೇಷನಿವಾರಣೆಯಾಗುವುದು. ಹೀಗೇತಕ್ಕೆ ಮಾಡಬಾರದು?

**ರುಕ್ಮ**—ಓಹೋ! ಬಹಳ ಸಂತೋಷ. ಶಿಶುಪಾಲನಿಗೇ ವರಮಾಲಿಕೆಯನ್ನು ಹಾಕಬೇಕೆಂದು ನಾನು ನನ್ನ ತಂಗಿಗೆ ಪ್ರೇರಿಸಿ, ಅದರಂತೆ ತಪ್ಪದೆ ನಡೆಯಿಸುವೆನು.

**ನಾರದ**—ಸರಿ! ರುಕ್ಮಿಣಿಯು ಅವನನ್ನೇ ವರಿಸುವಳು. ಅವನನ್ನೇ ವರಿಸುವಳು. (ಆತ್ಮ) ಕೃಷ್ಣನನ್ನೇ.

**ಜರಾಸಂಧ**—ನಾರದರೇ, ಕೃಷ್ಣನು ಸ್ವಯಂವರಕ್ಕೆ ಬರುವಂತೆ ಪ್ರೇರಿಸುವ ಭಾರವು ತಮಗೆ ಸೇರಿದುದು.

**ನಾರದ**—ಆಗಲಿ, ಸಂತೋಷ. ಇನ್ನು ನೀವು ಹೊರಡಿ. ವಿಫಲರಾಗಿ, ಹಿಂದಿರುಗಬೇಡಿ.

**ಶಿಶುಪಾಲ**—ಪೂಜ್ಯರೇ ಏನೆಂದಾಶೀರ್ವದಿಸಿದಿರಿ?

**ನಾರದ**—ವಿಫಲರಾಗಿ ಹಿಂದಿರುಗಬೇಡಿ; ಸಫಲರಾಗಿ ಬನ್ನಿ, ಎಂದೆನು.

**ಜರಾಸಂಧ**—ತಮ್ಮ ಆಶೀರ್ವಾದವು ಫಲಿಸಲಿ. ೨೮ (ಹೋಗುವರು.)

## ದೃಶ್ಯ ೪—ದ್ವಾರಕಾನಗರಕ್ಕೆ ಹೋಗುವ ಮಾರ್ಗ

೨೯

**ನಾರದ**—ಅನಂತ ಲೀಲಾಮಯರಾದ ಶ್ರೀಕೃಷ್ಣ ಬಲರಾಮರ ಮಹಿಮೆಯನ್ನರಿಯದೆ, ಅವರನ್ನು ಕೆಣಕಿ ಜರಾಸಂಧ ಶಿಶುಪಾಲ ಸಾಲ್ವಾದಿ ದುಷ್ಟರಾಜರು ನಾನಾಪಮಾನಗಳನ್ನು ಪಡೆದರು. ಇವರಂತೆಯೇ ಕರವೀರ ಪುರಾಧಿಪನಾದ ಸೃಗಾಲನು ಅವರೊಡನೆ ಕಾದಿ ಮಡಿದೇ ಹೋದನು. ಸೂರ್ಯದತ್ತವಾದ ಅವನ ರಥವೂ ಶ್ರೀಕೃಷ್ಣನ ವಶವಾಯಿತು. ಈಗ ಶ್ರೀಕೃಷ್ಣಪರಮಾತ್ಮನು ಕಾಲಯವನಾದಿಗಳನ್ನು ಸಂಹರಿಸಿ, ಉಳಿದ ದುಷ್ಟರಾಕ್ಷಸರ ಬಾಧೆಯು ತಮ್ಮ ಪ್ರಜೆಗಳಿಗೆ ಇಲ್ಲದಂತೆ ಮಾಡಲು ಸಮುದ್ರ ಮಧ್ಯದಲ್ಲಿ ವಿಶ್ವಕರ್ಮನಿಂದ ಅದ್ಭುತವಾಗಿಯೂ ಅತ್ಯಾಶ್ಚರ್ಯಕರವಾಗಿಯೂ ಇರುವ ದ್ವಾರಕಾನಗರವನ್ನು ನಿರ್ಮಾಣಮಾಡಿಸಿ, ಅಲ್ಲಿ ಬಂಧುಮಿತ್ರ ಪ್ರಜಾಸಹಿತನಾಗಿ ನಿರಾಕುಲದಿಂದಿರುವನು. ಆ ಪುರುಷೋತ್ತಮನಿಗೆ ತಕ್ಕವಳಾದ ರುಕ್ಮಿಣಿದೇವಿಯನ್ನು ಆಕೆಯ ಅಣ್ಣನಾದ ರುಕ್ಮಿಯು ತನ್ನ ಮಿತ್ರನಾದ ಶಿಶುಪಾಲನಿಗೆ ಕೊಟ್ಟು ವಿವಾಹಮಾಡಬೇಕೆಂದಾಲೋಚಿಸಿರುವನು. ಲಕ್ಷ್ಮೀದೇವಿಯಂಶಸಂಭೂತಳಾದ ಶ್ರೀ ರುಕ್ಮಿಣೀದೇವಿಯು, ಶ್ರೀಮನ್ನಾರಾಯಣಾವತಾರನಾದ ಶ್ರೀಕೃಷ್ಣಪರಮಾತ್ಮನಿಗೆ ಲಭಿಸುವುದುಚಿತವಾದ ಕಾರಣ, ನಾನೀಗಲೇ ದ್ವಾರಕಾನಗರಕ್ಕೆ ಹೋಗಿ ಶ್ರೀಕೃಷ್ಣನಿಗೆ ಆ ರುಕ್ಮಿಣೀದೇವಿಯ ರೂಪಲಾವಣ್ಯ ವೈಭವವನ್ನು ವಿವರಿಸಿ ಹೇಳಿ, ಆತನು ಆಕೆಯನ್ನು ಸಾಧಿಸಿ ವಿವಾಹಮಾಡಿಕೊಳ್ಳುವಂತೆ ಪ್ರೇರಿಸಿ, ಈ ದುಷ್ಟರಾದ ರುಕ್ಮಿ ಶಿಶುಪಾಲ ಜರಾಸಂಧಾದಿಗಳಿಗೆ ಇನ್ನೂ ಅವಮಾನಮಾಡಿಸಿ ಬುದ್ಧಿಗಲಿಸುವೆನು. (ಹೋಗುವನು.)

## ದೃಶ್ಯ ೫—ದ್ವಾರಕಾನಗರದಲ್ಲಿ ಶ್ರೀಕೃಷ್ಣ ಬಲರಾಮರ ಅರಮನೆ

(ಶ್ರೀಕೃಷ್ಣ ಬಲರಾಮರು ಮಾತನಾಡುತ್ತಿರುವರು.)

**ಕೃಷ್ಣ**—ಅಣ್ಣಾ! ರಾಕ್ಷಸರಾದ ಜರಾಸಂಧಾದಿಗಳಿಗೆ ನಮ್ಮಲ್ಲಿ ದ್ವೇಷವು ಸಹಜವು; ಆ ಭೀಷ್ಮಕರಾಜ ಪುತ್ರನಾದ ರುಕ್ಮಿಯೂ ನಮಗೆ ಶತ್ರುವಾಗಿರುವನಲ್ಲಾ. ಇದೇನಾಶ್ಚರ್ಯ?

**ಬಲರಾಮ**—ಕೃಷ್ಣಾ! ಇದೆಲ್ಲವೂ ಸಹವಾಸದೋಷವು. ಆ ನೀಚರ ಸ್ನೇಹದಿಂದ ಅವನ ಬುದ್ಧಿಯೂ ಹಾಗೆ ದುರ್ಮಾರ್ಗಕ್ಕೆ ತಿರುಗಿರುವುದು.

**ನಾರದ ಕಂ**|| ಜಯ ಜಯ ದಾನವ ಮಥನಾ |
* ಜಯ ಜಲನಿಧಿಸದನ ಚಾರು ಸುಸ್ಮಿತ ವದನಾ ||
ಜಯ ಜಯ ಕರುಣಾಭರಣಾ |
ಜಯ ಮುನಿಜನಶರಣ ಜಲಧಿಕನ್ಯಾರಮಣಾ ||೩೨||

(ಪ್ರವೇಶಿಸುವನು.)

**ಬಲರಾಮ, ಕೃಷ್ಣ**—(ಎದ್ದು) ಪೂಜ್ಯರಿಗೆ ವಂದಿಸುವೆವು. ಈ ರತ್ನಾಸನವನ್ನಲಂಕರಿಸಬೇಕು.

**ನಾರದ**—ರಾಮ ಕೃಷ್ಣರೇ! ನಿಮಗೆ ಮಂಗಳವಾಗಲಿ.

**ಕೃಷ್ಣ**—ಪೂಜ್ಯರೇ, ತಮ್ಮಾಗಮನದಿಂದ ಬಹಳ ಸಂತೋಷವಾಯಿತು. ವಿಶೇಷವೇನಾದರೂ ಉಂಟೇ?

**ನಾರದ**—ಕೃಷ್ಣಾ! ರೈವತಾಚಲನು ತನ್ನ ಪುತ್ರಿಯಾದ ರೇವತಿಯನ್ನು ಈ ಬಲಭದ್ರನಿಗೆ ಕೊಟ್ಟು ವಿವಾಹಮಾಡಿದ ವೈಭವವನ್ನು ನೋಡಿ ಆನಂದಪಟ್ಟೆನು. ಅಂತಹ ಆನಂದವು ನಿನ್ನ ವಿವಾಹದಿಂದ ನನಗೆಂದಾಗುವುದೆಂಬ ಕುತೂಹಲವು ನನಗುಂಟಾಗಿರುವುದು. ಇದೇ ವಿಶೇಷವು.

**ಬಲರಾಮ**—ಕೃಷ್ಣಾ! ಇವರಾಡುವ ಮಾತಿನಿಂದ ನಿನ್ನ ವಿವಾಹಕ್ಕಾಗಿ ಯಾವುದೋ ಸಂಧಾನವನ್ನೂ ಸಹ ಮಾಡಿಕೊಂಡೇ ಬಂದಿರುವಂತೆ ತೋರುವುದು.

**ನಾರದ**—(ಆತ್ಮ) ಬಹಳ ಚೆನ್ನಾಗಿ ಊಹಿಸಿದನು. (ಪ್ರಕಾಶ) ರಾಮ

ಕೃಷ್ಣರೇ! ನಾನು ಸಂಧಾನವನ್ನು ನಿಮ್ಮಿಂದ ಮಾಡಿಸಲು ಬಂದೆ ನಲ್ಲದೆ ನಾನು ಯಾವ ಸಂಧಾನವನ್ನೂ ಮಾಡಿಲ್ಲ. ಲೋಕಾದ್ಭುತ ಸೌಂದರ್ಯಶಾಲಿನಿಯಾದ ಕನ್ಯೆಯೊಬ್ಬಳನ್ನು ನೋಡಿ, ಆಕೆಯು ನಿನಗೆ ತಕ್ಕವಳೆಂಬುದನ್ನು ತಿಳಿಸಲು ಬಂದೆನು. ಅಷ್ಟೆ!

**ಕೃಷ್ಣ**—ಅಷ್ಟೇ! ಅಷ್ಟಾದರೆ ಸಾಕು. ಮುಂದಿನ ಸಾಧನೆಯು ನನಗಿರಲಿ. ಆ ವಧೂಮಣಿ ಯಾರು?

**ನಾರದ**—ಕೇಳು.

**ವೃ**|| ನವಲಾವಣ್ಯದ ಸೊಂಪಿನಿಂ ಸುಮಶರಂಗುತ್ಸಾಹಮಂ ಬೀರಿ ತ |
ನ್ನವಲೋಕಾಂಶುಗಳಿಂದಮಂಗಜನಿಷಂಗಕ್ಕಸ್ತ್ರಶಸ್ತ್ರಪ್ರತಾ ||
ನವ ನೀಡುತ್ತಮುಳಸ್ಮಿತಾಂಶು ಗಣದಿಂ ನೋಳ್ಪರ್ಗೆವಿಭ್ರಾಂತಿಭ |
ಸ್ಮವ ತೀಡುತ್ತಿಹ ರುಕ್ಮಿಣೀರಮಣಿಯಾ ಸೌಭಾಗ್ಯಮೇಂ ಬಣ್ಣಿಪೆಂ||

ಆ ವಿದರ್ಭರಾಜಪುತ್ರಿಯಾದ ರುಕ್ಮಿಣಿಯ ಸೌಂದರ್ಯ ಸೌಭಾಗ್ಯ ಲಕ್ಷಣಗಳು ಲೋಕಾಶ್ಚರ್ಯಕರವಾಗಿವೆ. ಆಕೆಯು ಶ್ರೀಲಕ್ಷ್ಮೀದೇವಿ ಯಂಶದಿಂದ ಜನಿಸಿರುವಳು. ಆದುದರಿಂದ ಶ್ರೀಮನ್ನಾರಾಯಣಾಂಶ ದಿಂದ ಜನಿಸಿರುವ ನಿನಗೆ ಆಕೆಯು ತಕ್ಕವಳು. ಆದರೆ ಆಕೆಗೆ ಸ್ವಯಂ ವರವು ಏರ್ಪಡುವುದು. ನಿನಗೆ ಶತ್ರುವಾದ ಶಿಶುಪಾಲನೂ ಸಹ ಆಕೆಯನ್ನು ಬಯಸಿರುವನು. ಆದುದರಿಂದ ನಿನಗೆ ಆಕೆಯನ್ನು ವರಿಸಲು ಸಾಧ್ಯವಾಗುವುದೋ ಇಲ್ಲವೋ ಎಂಬ ಸಂದೇಹವು ನನ್ನನ್ನು ಬಾಧಿಸುತ್ತಿರುವುದು.

**ಕೃಷ್ಣ**—ಏನು! ಏನು! ಅಸಾಧ್ಯವೆಂಬ ಸಂಶಯವೇ?

**ಕಂ**|| ಯದುವಂಶದೆ ನಾಂ ಜನಿಸಿರೆ |
ಮುದದಿಂದಾ ಲಕ್ಷ್ಮಿ ಭೀಷ್ಮಭೂಪಾಲಕನೊಳ್ ||
ಉದಿಸಿಹಳೆನಗಲ್ಲದೆ ಆ |
ಸುದತಿಯ ಬಯಸುತ್ತೆ ಬರ್ದುಕುವಾಕಲಿಯಾವಂ?||೩೪||

ಆ ರುಕ್ಮಿಣಿಯು ಪರಮ ಸೌಂದರ್ಯವತಿಯೆಂದು ಜನಜನಿತವಾರ್ತೆ ಗಳಿಂದ ಕೇಳಿ, ನಾನೂ ಆಕೆಯನ್ನೇ ವಿವಾಹಮಾಡಿಕೊಳ್ಳಬೇಕೆಂದಿರುವೆನು.

**ನಾರದ**—ಆಕೆಯ ಅಣ್ಣನಾದ ರುಕ್ಮಿಯು ನಿನಗೆ ಶತ್ರುಗಳಾದ ಜರಾಸಂಧ ಶಿಶುಪಾಲಾದಿಗಳ ಪಕ್ಷದವನಲ್ಲವೇ? ನಿನಗೆ ತಂಗಿಯನ್ನು ಕೊಡಲು ಸಮ್ಮತಿಸಲಾರನೆಂದು ನನಗೆ ತೋರುವುದು.

**ಕೃಷ್ಣ**—ಸ್ವಯಂವರವೇರ್ಪಟ್ಟರೆ ಅವನ ಸಮ್ಮತಿಯನ್ನು ಕೇಳುವವರು ಯಾರು? ಆ ಕನ್ಯೆಯನ್ನು ನೀವು ನೋಡಿರುವಿರಲ್ಲವೇ?

**ನಾರದ**—ನೋಡಿರುವುದರಿಂದಲೇ ಹೇಳಲು ಇಷ್ಟು ಆತುರನಾಗಿ ಬಂದುದು.

**ಕಂ**|| ಲೋಕಾಶ್ಚರ್ಯವಧೂಮಣಿ |
ಯಾ ಕನ್ಯಕೆ ಲೋಕನಾಥ ನಿನಗಾಗದಿರಲ್ ||
ಮಾಕಂದಂ ಗಿಳಿಗಿಲ್ಲದೆ |
ಕಾಕದ ಕೈಸೇರ್ದವೋಲ್ ನಿರರ್ಥಕಮಕ್ಕುಂ ||೩೫||

ಆದಕಾರಣ ನೀನು ತಕ್ಕ ಪ್ರಯತ್ನಗಳನ್ನು ಬೇಗನೆ ಮಾಡಿ ಆ ಕನ್ನಿಕೆಯನ್ನು ಸಾಧಿಸಿಕೊಂಡರೆ ನಿನಗೆ ದಕ್ಕುವಳು. ಇಲ್ಲವಾದರೆ ಆ ರುಕ್ಮಿಯ ಮಿತ್ರನಾದ ಶಿಶುಪಾಲನು ಆಕೆಯನ್ನು ವಿವಾಹಮಾಡಿಕೊಳ್ಳಲು ಪ್ರಯತ್ನಿಸುತ್ತಿರುವಂತೆ ತಿಳಿದೆನು. ಮುಂದಿನ ಕಾರ್ಯವನ್ನು ನೋಡು

**ಕೃಷ್ಣ**—**ಕಂ**|| ನೋಡುವೆನೊ! ಜಡರ ಕಡಿದೀ |
ಡಾಡುವೆನೋ ಖಳರ ತಲೆಯ ಚೆಂಡಾಡುವೆನೋ! ||
ಮಾಡುವೆನೊ ಸಮರಮಂ ಕೊಂ |
ಡೋಡುವೆನೋ ರುಕ್ಮಿಣಿಯನೆ ನಮ್ಮ ಪುರಕ್ಕಾಂ ||೩೬||

ಸಿಂಹವು ಕಾದಿರುವ ಆಹಾರವನ್ನು ನರಿಯು ಬಯಸಿದಂತೆ, ನಾನು ಬಯಸಿರುವ ಆ ಶಶಿಮುಖಿಯು ಆ ಬಡ ಶಿಶುಪಾಲನಿಗೆ ಲಭಿಸುವಳೇ? ಇರಲಿ, ಸರ್ವಪ್ರಯತ್ನದಿಂದಲೂ ನಾನು ಆ ಸುಂದರೀರತ್ನವನ್ನು ಸಾಧಿಲೇ ಸಾಧಿಸುವೆನು.

**ನಾರದ**—ಕೃಷ್ಣಾ! ದುಡುಕಬೇಡ. ಮೊದಲು ನೀನು ಗೋಪ್ಯವಾಗಿ ಆ ರುಕ್ಮಿಣೀದೇವಿಯ ಮನವನ್ನು ಪರೀಕ್ಷಿಸಿ, ಆಕೆಯ ಅನುರಾಗವನ್ನು ಸಂಪಾದಿಸಿದಲ್ಲಿ ನಿನ್ನ ಕಾರ್ಯವು ನಿರಾಯಾಸವಾಗಿ ಕೈಗೂಡುವುದು.

ಇಲ್ಲವಾದರೆ ಸ್ವಯಂವರಕಾಲದಲ್ಲಿ, ಚಪಲೆಯರಾದ ಹೆಣ್ಣುಗಳ ಮನವನ್ನು ಕಂಡವರು ಯಾರು?

**ಬಲರಾಮ**—ಕೃಷ್ಣಾ! ಪೂಜ್ಯರು ಹೇಳುವುದು ನಿಜ. ಮೊದಲು ಆಕೆಗೆ ನಿನ್ನಲ್ಲಿ ಅನುರಾಗವಿರುವುದೆಂಬ ವಿಷಯವನ್ನು ಸ್ಥಿರಪಡಿಸಿಕೊಂಡು ಮುಂದಿನ ಪ್ರಯತ್ನವನ್ನು ಮಾಡುವುದೇ ಉಚಿತವು.

**ಕೃಷ್ಣ**—ನಿಜ, ಅಣ್ಣಾ! ಹಾಗೆಯೇ ಮಾಡಬೇಕು. ಈಗ ನಾನು ರುಕ್ಮಿಣಿಯ ಮನವನ್ನು ಪರೀಕ್ಷಿಸುವುದು ಯಾವ ವಿಧದಿಂದ?

**ನಾರದ**—ವೇಷಾಂತರದಿಂದ.

**ಕೃಷ್ಣ**—ಅಹುದು. ಸರಿಯಾದ ಆಲೋಚನೆ. (ಆಲೋಚಿಸಿ) ಆದರೆ ಇದಕ್ಕೆ ನನಗೆ ತಕ್ಕ ಸಹಾಯಕನೊಬ್ಬನು ಬೇಕಲ್ಲವೇ?

**ಬಲರಾಮ**—ಸರಿ, ನಿನ್ನ ಪರಮಾಪ್ತಮಿತ್ರನಾದ ಮಕರಂದನಂತಹ ಚತುರನಿರುವಲ್ಲಿ ನೀನು ಸಹಾಯಕರಿಗಾಗಿ ಬೇರೆ ಆಲೋಚಿಸಬೇಕೇ?

**ಕೃಷ್ಣ**—ಓಹೋ! ನಿಜ! ವೇಷಭೂಷಣದಲ್ಲಿ ಅವನು ಮಹಾ ನಿಪುಣನು. ಈ ಕಾರ್ಯಕ್ಕೆ ಅವನೇ ಸರಿ. (ಪಕ್ಕದಲ್ಲಿ ನೋಡಿ) ಮಕರಂದಾ,

**ಮಕರಂದ**—(ಓಡಿಬಂದು) ಬಂದೆ ಅಂದ.

**ಕೃಷ್ಣ**—ಈಗ ನಿನ್ನಿಂದ ನನಗೊಂದು ಸಹಾಯವಾಗಬೇಕು.

**ಮಕರಂದ**—ಏನಾಗಬೇಕು?

**ಕೃಷ್ಣ**—ಹೆಣ್ಣಾಗಬೇಕು.

**ಮಕರಂದ**—ನಾನೆಲ್ಲಿ ಹುಡುಕಲಪ್ಪಾ ಹೆಣ್ಣನ್ನು? ನಾರದರಿಗೆ ಹೇಳಬಾರದೇ? ಅವರು ತ್ರಿಲೋಕ ಸಂಚಾರಿಗಳು.

**ಕೃಷ್ಣ**—ನಾರದರು ಹೆಣ್ಣನ್ನು ಹುಡುಕಿಕೊಂಡೇ ಬಂದಿರುವರು. ಸದ್ಯಕ್ಕೆ ನೀನು ಹೆಣ್ಣಾಗಬೇಕು.

**ಮಕರಂದ**—ಹಾಗಾದರೆ ಅದನ್ನು ಬಿಟ್ಟು ನನ್ನನ್ನೇ ಮದುವೆಯಾಗುವೆಯೇನು?

**ಕೃಷ್ಣ**—ಹಾಗಲ್ಲವೋ ಅವಿವೇಕೀ. ನೀನು ಹೆಣ್ಣುವೇಷವನ್ನು ಧರಿಸಿ, ಆ ಹೆಣ್ಣನ್ನು ಸಾಧಿಸುವುದರಲ್ಲಿ ನನಗೆ ಸಹಾಯಕನಾಗಬೇಕು.

**ಮಕರಂದ**—ಹಾಗಾದರೆ ನನ್ನನ್ನು ಮದುವೆಯಾಗುವುದಿಲ್ಲವಷ್ಟೆ?

**ಕೃಷ್ಣ**—ಹುಚ್ಚನೋ ನೀನು! ಈ ಪರಿಹಾಸ್ಯವು ಸಾಕು; ಕೇಳು, ನಾನೊಬ್ಬ ಕೊರವಂಜಿ ಹುಡುಗಿಯಂತೆ ವೇಷ ಹಾಕಿಕೊಳ್ಳುವೆನು. ನೀನು ಕಣಿ ಹೇಳುವ ಕೊರವಂಜಿಯಾಗು. ನಾವಿಬ್ಬರೂ ಹೋಗಿ, ಆ ಭೀಷ್ಮಕರಾಜಪುತ್ರಿಯಾದ ರುಕ್ಮಿಣಿಗೆ ಕಣಿಯನ್ನು ಹೇಳಿ, ಆಕೆಯ ಚಿತ್ತವನ್ನು ಪರೀಕ್ಷಿಸಿ, ನನ್ನಲ್ಲಿ ಆಕೆಗೆ ಅನುರಾಗವು ಹುಟ್ಟುವಂತೆ ಮಾಡಿ ಬರಬೇಕು.

**ಮಕರಂದ**—ಓಹೋ! ಹಾಗಾದರೆ ನೀನೂ ಹೆಣ್ಣಾಗುವೆಯೋ? ಸರಿ. ನೀನೇ ಹೆಂಗಸಾಗಬಹುದಂತೆ. ನಾನೇತಕ್ಕೆ ಆಗಬಾರದು! ಆದರೆ ನೀನು ಹೆಣ್ಣಾದರೆ ನಿನಗೆ ಹೆಣ್ಣು ದೊರೆಯುವುದು. ನಾನು ಹೆಣ್ಣಾದರೆ ನನಗೆ ದೊಣ್ಣೆಯ ಪೆಟ್ಟು ದೊರೆಯುವುದೋ ಏನೋ?

**ಕೃಷ್ಣ**—ಅವಿವೇಕದಿಂದ ಹರಟಿದರೆ ದೊಣ್ಣೆಯ ಪೆಟ್ಟು ಬೀಳುವುವು. ಹುಚ್ಚನಂತೆ ಹರಟದೆ ಸುಮ್ಮನೆ ನಾನು ಹೇಳಿದಂತೆ ಕೇಳು.

**ಮಕರಂದ**—ನಿನಗಾಗಿ ಏನೇನು ಪಾಡು ಪಡಬೇಕೋ ಆಗಲಿ.

**ಕೃಷ್ಣ**—ಪೂಜ್ಯರೇ! ಇನ್ನು ನಾವು ವೇಷಾಂತರದಿಂದ ಕುಂಡಿನ ನಗರಕ್ಕೆ ಪ್ರಯಾಣಮಾಡುವೆವು.

**ನಾರದ**—ಆಗಬಹುದು.

**ಬಲರಾಮ**—(ನಗುತ್ತ) ಕೃಷ್ಣಾ! ಉತ್ತಮವಾದ ಪುರುಷರೂಪವನ್ನು ಬಿಟ್ಟು, ಹೆಣ್ಣುವೇಷವನ್ನಾದರೂ ಧರಿಸಿ, ಆ ಹೆಣ್ಣನ್ನು ಸಾಧಿಸಬೇಕೇ? ನಾನಾಗಿದ್ದರೆ ಅದರಿಂದ ಎಷ್ಟು ಪ್ರಯೋಜನವಾದರೂ ಹೆಣ್ಣಾಗಿ ಬೇರೆ ವೇಷವನ್ನು ಧರಿಸುತ್ತಿರಲಿಲ್ಲ.

**ಮಕರಂದ**—ಬಲರಾಮದೇವಾ, ಸಹವಾಸ ದೋಷವಿದು. ಹೆಣ್ಣುಗಳ ಮಧ್ಯದಲ್ಲಿಯೇ ಓಡಿಯಾಡಿ ಭ್ರಮರಕೀಟನ್ಯಾಯದಂತೆ ಇವನೂ ಹೆಣ್ಣಾಗಿಯೇ ಬಿಡುವನೋ ಎಂಬ ಸಂಶಯವು ನನಗೂ ಹುಟ್ಟಿರುವುದು.

**ಕೃಷ್ಣ**—ಸಾಕೋ, ನಿನ್ನ ತಲೆಹರಟೆಗಳು, ಸುಮ್ಮನೆ ಬಾ ಹೋಗೋಣ.

**ಮಕರಂದ**—ಹಾಗೆಯೇ ಆಗಲಿ ನಡೆ.

**ದ್ವಿತೀಯಾಂಕಂ ಸಂಪೂರ್ಣಂ**

---

# ತೃತೀಯಾಂಕಂ

## ದೃಶ್ಯ ೧.—ಕುಂಡಿನನಗರದಲ್ಲಿ ಶಿಶುಪಾಲನ ಬಿಡಾರ

**ಶಿಶುಪಾಲ—** || ವೃತ್ತ ||

ಸೆಳೆಮಿಂಚಂ ಚಪಲಾಕ್ಷಿವೀಕ್ಷಣದಿನಾ ಬೆಳ್ದಿಂಗಳಂ ಹಾಸದಿಂ |
ಗಿಳಿಯಂ ವಾಕ್ಸುವಿಲಾಸವೈಭವದಿನುದ್ಯದ್ಗಾನದಿಂ ಮತ್ತಕೋ ||
ಕಿಲಮಂ ರಾಜಮರಾಳಮಂ ಗಮನದಿಂ ಕೀಳ್ಗೈದು ರಾರಾಜಿಪಾ |
ಲಲನಾರತ್ನಮನೆಂತು ಬಣ್ಣಿಪೆನಹೋ! ಶ್ರೀರುಕ್ಮಿಣೀದೇವಿಯಂ ||೩೭||

ಭುವನಮೋಹಿನಿಯಾದ ರುಕ್ಮಿಣಿಯ ರೂಪಲಾವಣ್ಯ ವಿಭ್ರಮಗಳನ್ನೂ, ಗುಣ ಗಾಂಭಿರ್ಯ ಸೌಭಾಗ್ಯಗಳನ್ನೂ, ಜನಜನಿತ ವಾರ್ತೆಗಳಿಂದ ಕೇಳಿ ನನ್ನ ಮನವು ಆಕೆಯಲ್ಲಿಯೇ ಲೀನವಾಗಿರುವುದು. ಆ ಮನೋಹರೆಯನ್ನು ಪಡೆಯುವ ಅಭಿಮತದಿಂದ ಈ ಕುಂಡಿನನಗರಕ್ಕೆ ಬಂದು ಆಕೆಯನ್ನು ನೋಡಿದುದೂ ಆಯಿತು. ಪರಿಮಳ ಪರಿಶೋಭಿತವಾದ ಕನಕಪುತ್ಥಳಿಯಂತೆಯೂ, ಜನನೇತ್ರಾಕರ್ಷಣ ಮಂತ್ರದೇವತೆಯಂತೆಯೂ, ಮದನಮಾಯಾಮೋಹಿನಿಯಂತೆಯೂ ಕಂಗೊಳಿಸುತ್ತಿರುವ ಆ ಕನ್ಯಾಮಣಿಯನ್ನು ನೋಡಿ ಮನಸೋತು ಮರುಳಾಗದಿರುವ ಪುರುಷನು ಯಾವನಿರುವನು! ಇಂತಹ ಕನ್ಯಾರತ್ನದ ಕೈಪಿಡಿಯದವನ ಜನ್ಮವು ವ್ಯರ್ಥವೇ ಸರಿ. ರಾಜರ ಪದ್ಧತಿಯಂತೆ ರುಕ್ಮಿಣಿಗೆ ಸ್ವಯಂವರವೇರ್ಪಟ್ಟಿರುವುದು. ನನ್ನನ್ನೇ ವರಿಸುವಂತೆ ಆಕೆಯನ್ನು ಪ್ರೇರಿಸುವುದಾಗಿ ರುಕ್ಮಿಯು ನನಗೆ ವಾಗ್ದಾನಮಾಡಿರುವನಾದರೂ, ಸ್ವಯಂವರಕಾಲದಲ್ಲಿ ರುಕ್ಮಿಣಿಯು ಒಂದುವೇಳೆ ಚಪಲತೆಯಿಂದ ನನ್ನನ್ನಲ್ಲದೆ ಅನ್ಯನನ್ನು ವರಿಸುವಳೋ ಏನೋ ಎಂಬ ಸಂಶಯವು ಬೇರೆ ಮನವನ್ನು ಬಾಧಿಸುತ್ತಿರುವುದು. ಇದಕ್ಕೇನು ಮಾಡಲಿ?

**ನಾರದ—**(ಪ್ರವೇಶಿಸುವನು). **೩೦**

**ಶಿಶುಪಾಲ—**ಓಹೋ! ನಾರದರು! ಪೂಜ್ಯರಿಗೆ ವಂದಿಸುವೆನು.

**ನಾರದ**—ಶ್ರೇಯೋಸ್ತು, ಏನು ಚೇದಿರಾಜಾ? ಏನೋ ಆಲೋಚನಾ ಮಗ್ನನಾದಂತಿರುವೆಯಲ್ಲಾ!

**ಶಿಶುಪಾಲ**—ಪೂಜ್ಯರೇ! ಆಪ್ತರಾದ ತಮ್ಮಲ್ಲಿ ಹೇಳಿಕೊಳ್ಳದ ವಿಷಯುವೇನಿರುವುದು! ಆದಿನ ತಮ್ಮ ಸಮುಖದಲ್ಲಿ ನಮ್ಮ ಮಿತ್ರನಾದ ರುಕ್ಮಿಯು ಮಾಡಿದ ವಾಗ್ದಾನವನ್ನು ಬಲ್ಲಿರಷ್ಟೆ! ಆದರಂತೆ ರುಕ್ಮಿಣಿಯು ನನ್ನನ್ನು ವರಿಸಲು ಒಪ್ಪಿರುವಳೇ, ಮತ್ತು ಆಕೆಯ ಪ್ರೇಮವು ನನ್ನಲ್ಲಿಯೇ ಸ್ಥಿರಪಟ್ಟಿರುವುದೇ, ಎಂಬುದನ್ನರಿಯಬೇಕೆಂಬ ಕುತೂಹಲವು ಮನಸ್ಸನ್ನು ಬಾಧಿಸುತ್ತಿರುವುದು.

**ನಾರದ**—ಆ ವಿಷಯವು ನಿನಗೇಕೆ? ಅದರ ಸುದ್ದಿಯನ್ನೇ ಬಿಡು. ನೀನು ಆ ಆಲೋಚನೆಯನ್ನೇ ಇಟ್ಟುಕೊಳ್ಳಬೇಡ.

**ಶಿಶುಪಾಲ**—ಹಾಗೆಂದರೆ?

**ನಾರದ**—ರುಕ್ಮಿಯು ನಿನಗೆ ವಾಗ್ದಾನಮಾಡಿರುವನಷ್ಟೆ? ಅದು ಹೇಗೆ ನಡೆಯಬೇಕೋ ಹಾಗೆಯೇ ನಡೆಯುವುದು.

**ಶಿಶುಪಾಲ**—ರುಕ್ಮಿಯೇನೋ ನನಗನುಕೂಲವಾದ ಪ್ರಯತ್ನವನ್ನು ಮಾಡಿಯೇ ಇರುವನು. ಆದರೆ ಸ್ವಯಂವರಕಾಲದಲ್ಲಿ ಆ ರುಕ್ಮಿಣಿಯ ಮನವನ್ನು ಕಂಡವರು ಯಾರು? ಯಾರಿಗೆ ಆಕೆಯು ವರಮಾಲಿಕೆಯನ್ನು ಹಾಕುವಳೋ ಎಂಬ ಸಂಶಯವು ನನ್ನ ಮನವನ್ನು ಚಪಲಗೊಳಿಸಿರುವುದು.

**ನಾರದ**—ಶಿಶುಪಾಲಾ! ನೀನು ಆ ವಿಷಯದಲ್ಲಿ ಚಪಲನಾಗಬೇಡ. ಯಾವನು ನವಯೌವನರೂಪ ಸೌಭಾಗ್ಯಸಂಪನ್ನನೋ, ಯಾವನು ಮಹಾವಿನೋದ ವಿಲಾಸವಿಭ್ರಮನೋ, ಯಾವನು ಧೈರ್ಯಶೌರ್ಯ ಗಾಂಭೀರ್ಯಾದಿ ಗುಣಮನೋಹರನೋ, ಅಂತಹ ಪುರುಷೋತ್ತಮನನ್ನೇ ಆ ರುಕ್ಮಿಣಿಯು ವರಿಸುವಳು.

**ಶಿಶುಪಾಲ**—ನಿಜ! ನಿಜ! (ಸಂತೋಷದಿಂದ) ನಾನಲ್ಲದೆ ತಾವು ಹೇಳಿದಂತಹ ಪುರುಷೋತ್ತಮನು ಮತ್ತೆ ಯಾವನಿರುವನು?

**ನಾರದ**—ನಿನ್ನಂತಹ ಪುರುಷನು ಮತ್ತೆ ಯಾವನೂ ಇಲ್ಲ. ಆದರೆ ಒಂದು ವಿಚಾರವನ್ನು ಮಾತ್ರ ನಿನ್ನ ಗಮನಕ್ಕೆ ತರಬೇಕೆಂದು ನಾನು ಅತಿ ತ್ವರೆಯಿಂದ ಬಂದೆನು.

**ಶಿಶುಪಾಲ**—ಮತ್ತೇನು ?

**ನಾರದ**—ನೀವುಗಳು ಆಲೋಚಿಸಿದಂತೆಯೇ ಆ ನಿನ್ನ ಶತ್ರುವಾದ ಗೋಪಾಲನು ರುಕ್ಮಿಣಿಯ ಮೇಲೆ ಮನವನ್ನಿಟ್ಟಿರುವಂತೆ ನನಗೆ ತಿಳಿಯ ಬಂತು. ಅದರಿಂದ ಆ ಹೆಣ್ಣು ಅವನ ಕಣ್ಣಿಗೆ ಬಿದ್ದುದೇ ಆದರೆ ನೀನು ಬಹು ಶ್ರಮಪಡಬೇಕಾಗುವುದು.

**ಶಿಶುಪಾಲ**—(ನಕ್ಕು) ಏನು ? ಆ ಗೋಪಾಲನೇ ? ಆ ಕೃಷ್ಣನು ! ಆ ದನ ಕಾಯುವವನು ! ಅವನ ಕಣ್ಣಿಗೆ ಹೆಣ್ಣು ಬೀಳುವುದೋ ಮಣ್ಣು ಬೀಳುವುದೋ ನಾನು ನೋಡುವೆನು. ಈ ಶಿಶುಪಾಲನು ಕಾದಿರುವ ಶಶಿಫಾಲೆಯು ಆ ಪಶುಪಾಲನಿಗೆ ವಶಳಾಗುವಳೇ ?

**ನಾರದ**—ಶಿಶುಪಾಲಾ ! ಅದು ಮುಂದೆ ಹೇಗಾಗುವುದೆಂಬುದನ್ನು ನಾನು ಬಲ್ಲೆನು. ಆದರಿಂದಲೇ ನೀನು ಆ ಆಲೋಚನೆಯನ್ನೇ ಬಿಡೆಂದೆನು.

**ಶಿಶುಪಾಲ**—ಭಲಾ ! ಬಹಳ ಸಂತೋಷ ! ಬಹಳ ಸಂತೋಷ !

**ನಾರದ**—(ಆತ್ಮ) ರುಕ್ಮಿಣಿಯು ಶ್ರೀಕೃಷ್ಣನ ರೂಪ ವಿಕ್ರಮ ಸೌಭಾಗ್ಯ ಗಳನ್ನು ಕೇಳಿ ಅವನಲ್ಲಿಯೇ ಬದ್ಧಾನುರಾಗಳಾಗಿರುವಳೆಂಬ ವಿಚಾರ ವನ್ನು ಭೀಷ್ಮಕರಾಜನಿಂದ ತಿಳಿದಿರುವೆನು. ಶ್ರೀಲಕ್ಷ್ಮೀದೇವಿಯವ ತಾರಳಾದ ಆಕೆಯು ಮಹಾವಿಷ್ಣುಸ್ವರೂಪನಾದ ಶ್ರೀಕೃಷ್ಣನಿಗೇ ಲಭಿ ಸುವಳೆಂಬುದರಲ್ಲಿ ಸಂದೇಹವೇ ಇಲ್ಲ. ಆಗಲಿ ; ಅತ್ಯಾಶಾಮೋಹಿತನಾದ ಈ ಶಿಶುಪಾಲನಿಗೆ ತಕ್ಕ ಗರ್ವಭಂಗವಾಗಲಿ ; (ಪ್ರಕಾಶ) ಶಿಶುಪಾಲ ಭೂಪಾಲಾ, ಹೇಗಾದರೂ ಆಗಲಿ ; ನೀನು ರುಕ್ಮಿಣಿಗೆ ನಿನ್ನಲ್ಲಿ ಪ್ರೀತಿ ಹುಟ್ಟುವಂತೆ ಮಾಡಿಕೊಳ್ಳುವುದು ಸಮಯೋಚಿತವು.

**ಶಿಶುಪಾಲ**—ನಿಜ ! ನಿಜ ! ಹಾಗೆ ಮಾಡಲೇಬೇಕು. ಹಾಗೆಯೇ ಮಾಡುವೆನು ! ನನ್ನಂತಹ ಮಹಾಪರಾಕ್ರಮಿಯಾದ ರಾಜನನ್ನು ಅವಳು ವರಿಸದೆ ಇರಲಾರಳು. ಆದುದರಿಂದ ರುಕ್ಮಿಣಿಯು ಉಪವನದಲ್ಲಿರುವ

ಸಮಯವನ್ನರಿತು, ಅಲ್ಲಿಗೆ ಹೋಗಿ ಮಾತನಾಡಿಸಿ, ನನ್ನಭೀಷ್ಟವನ್ನು ನೆರವೇರಿಸಿಕೊಳ್ಳುವೆನು.

**ನಾರದ**— ಹಾಗೆಯೇ ಮಾಡು. (ಹೋಗುವರು.)

## ದೃಶ್ಯ ೨—ಕುಂಡಿನನಗರದ ರಾಜೋದ್ಯಾನದ ಮುಂದುಗಡೆ

(ಕೃಷ್ಣ ಮಕರಂದರು, ಕೊರವಂಜಿಯರ ವೇಷಗಳನ್ನು ಧರಿಸಿ ಪ್ರವೇಶಿಸುವರು.) ೩೧

**ಮಕರಂದ**—ಕೃಷ್ಣಾ! ಸ್ತ್ರೀವೇಷವು ನಿನಗೆ ಬಹಳ ಚೆನ್ನಾಗಿ ಒಪ್ಪಿರುವುದು. ನನ್ನ ವೇಷವು ಹೇಗಿರುವುದು?

**ಕೃಷ್ಣ**—ಮಕರಂದಾ! ನನಗಿಂತಲೂ ನಿನಗೆ ಈ ವೇಷವು ಬಹಳ ಅಂದವಾಗಿರುವುದು.

**ಮಕರಂದ**—ಓಹೋ! ಹಾಗಾದರೆ ಕಷ್ಟ!

**ಕೃಷ್ಣ**—ಕಷ್ಟವೇನೋ? ಇನ್ನೂ ಅನುಕೂಲವೇ ಅಲ್ಲವೇ?

**ಮಕರಂದ**—ಒಳ್ಳೆಯ ಅನುಕೂಲ! ಹೆಣ್ಣು ಮುದ್ದಾಗಿರುವಳೆಂದು ದಾರಿಯಲ್ಲಿ ಹೋಗುವಾಗ ನಿನ್ನಂತಹ ಹುಡುಗರು ನನ್ನನ್ನೇ ರೆಪ್ಪೆ ಹೊಡೆಯದೆ ದೃಷ್ಟಿಸಿ ನೋಡಿದರೆ ನನ್ನ ಗತಿಯೇನು? ....... ನನಗೆ ದೃಷ್ಟಿಯಾಗುವುದಿಲ್ಲವೇ?

**ಕೃಷ್ಣ**—ಗತಿಯೇನು! ಆಗ "ನಾನು ಹೆಣ್ಣಲ್ಲ, ಗಂಡಸು" ಎಂದು ಹೇಳಿದರಾಯಿತು.

**ಮಕರಂದ**—ಸರಿ! ಹಾಗೆ ಹೇಳುವುದು, ಅವರಿಂದ ನಗಿಸಿಕೊಂಡು ಅವಮಾನಪಡುವುದು. ಇದೇ ನೀನು ಹೇಳಿಕೊಡುವುದು, ಸಾಕು ಸಾಕು.

**ಕೃಷ್ಣ**—ರಂಭೆಯಂತಿರುವ ನಿನ್ನ ರೂಪವು ಮೋಹಕರವಾದುದೇ ಸರಿ. ಆದರೆ ನಿನ್ನನ್ನು ವೇಷಧಾರಿಯೆಂದು ತಿಳಿದರೆ, ಜನರು ನಿನ್ನ ಚಮತ್ಕಾರಕ್ಕಾಗಿ ಮತ್ತಷ್ಟು ಸಂತೋಷಪಡುವರು.

**ಮಕರಂದ**—ಸಂತೋಷಪಡುವರೇಕೆ! ನಕ್ಕು ಪರಿಹಾಸ್ಯಮಾಡಿ ಕುಚೇಷ್ಟೆಗಳಿಂದ ಗೇಲಿಗೆಬ್ಬಿಸುವರು.

**ಕೃಷ್ಣ**—ಹಾಗೆಂದಿಗೂ ಮಾಡಲಾರರು. ಒಂದು ವೇಳೆ ಹಾಗೆ ಮಾಡಿದರೂ, ನಾನು ನಿನ್ನ ಬಳಿಯಲ್ಲಿಯೇ ಇರುವೆನಲ್ಲಾ ! ಭಯವೇನು ?

**ಮಕರಂದ**—ನಿಜ ! ನನ್ನನ್ನು ಒಂದು ವೇಳೆ ಯಾರಾದರೂ ಮಾತನಾಡಿಸಿದರೂ, ನೀನು ಬಳಿಗೆ ಬಂದರೆ ನಿನ್ನ ಕರಿಯ ರೂಪವನ್ನು ನೋಡಿ ಹೆದರಿ ಓಡಿಹೋಗುವರು. ನಿಜ.

**ಕೃಷ್ಣ**—ಇನ್ನು ಆ ರುಕ್ಮಿಣಿಯಿರುವ ಸ್ಥಳವನ್ನು ತಿಳಿದು, ಅಲ್ಲಿಗೆ ಹೋಗೋಣ. ಆದರೆ ಈಗ ನಮ್ಮ ಹೆಸರುಗಳನ್ನು ಏನೆಂದು ಇಟ್ಟುಕೊಳ್ಳುವುದು ?

**ಮಕರಂದ**—ಇದು ಒಳ್ಳೆಯ ಸಮಸ್ಯೆ ಬಂತೇ ! ಕೃಷ್ಣಾ ! ನೀನು ಗೋವಿಂದಮ್ಮನೆಂದು ಹೆಸರಿಟ್ಟುಕೋ, ನಾನು ಮಕರಂದಮ್ಮನೆಂದು ಹೆಸರಿಟ್ಟುಕೊಳ್ಳುವೆನು.

**ಕೃಷ್ಣ**—ಮಕರಂದಾ ! ಎಂತಹ ಅರಸಿಕನೂ, ಅವಿವೇಕಿಯೋ ನೀನು ! ಗೋವಿಂದಮ್ಮ ಮಕರಂದಮ್ಮನೆಂಬ ಹೆಸರುಗಳು ಕೊರವಂಜಿಯರಿಗೆ ಹೊಂದಿಕೆಯಾಗಿರುವುವೇನೋ ? ಇದೂ ಅಲ್ಲದೆ ಈ ಹೆಸರುಗಳಿಂದ ನಮ್ಮನ್ನು ಯಾರು ಬೇಕಾದರೂ ಸುಲಭವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲವೇ ? ಆದುದರಿಂದ ಗೋವಿಂದಮ್ಮನೂ ಬೇಡ, ಗೋಪಾಲಮ್ಮನೂ ಬೇಡ, ಮಕರಂದಮ್ಮನೂ ಬೇಡ; ನಾನು ಮಾದವ್ವ, ನೀನು ಮಕರವ್ವ, ತಿಳಿಯಿತೇ ?

**ಮಕರಂದ**—ಓಹೋ ! ಸರಿ. ನೀನು ಮಾಧವನು ಮಾದವ್ವನಾಗು, ನಾನು ಮಕರಂದ, ಮಕರವ್ವನಾಗುವೆನು.

**ಕೃಷ್ಣ**—ಸರಿ. ಈಗ ನೀನು ಮಕರಂದನಲ್ಲ, ನಾನು ಕೃಷ್ಣನಲ್ಲ.

**ಮಕರಂದ**—ಸರಿ, ನೀನು ಕೃಷ್ಣನಲ್ಲದಿದ್ದ ಮೇಲೆ ಇನ್ನು ರುಕ್ಮಿಣಿಯ ಸುದ್ದಿಯೇತಕ್ಕೆ ? ನಡೆ ಮನೆಗೆ ಹೋಗೋಣ.

**ಕೃಷ್ಣ**—ಛೀ ! ಅವವೇಕಿಯೋ ನೀನು. ನಾನೇನೋ ಕೃಷ್ಣನೇ. ಆದರೆ ವೇಷದಲ್ಲಿ ಮಾತ್ರ ಮಾದವ್ವ, ಕೊರವಂಜಿ.

**ಮಕರಂದ**—ಓಹೋ! ಸರಿ ತಿಳಿಯಿತು. ಇನ್ನು ನೀನು ಮಾದವ್ವ. ನಾನು ಮಕರವ್ವ. ಹೀಗೆ ನಟನೆಮಾಡಬೇಕು. ಅಲ್ಲವೇ?

**ಕೃಷ್ಣ**—ಅಹುದು. ವೇಷಧಾರಿಯಾಗಿರುವೆನೆಂಬದನ್ನು ಮರೆತು, ಎಲ್ಲಿ ಯಾದರೂ ಗುಟ್ಟುಬಿಟ್ಟು ಮಾತನಾಡೀಯೆ! ಎಚ್ಚರಿಕೆ!

**ಮಕರಂದ**—ಇಲ್ಲ. ಬಾ ಕೃಷ್ಣಾ. (ಹೋಗುವರು.)

## ದೃಶ್ಯ ೩—ಉಪವನ

೩.೨ (ರುಕ್ಮಿಣಿಯು ಸಖಿಯರೊಡನೆ ಪ್ರವೇಶಿಸುವಳು.)

**ರುಕ್ಮಿಣಿ**—ಸಖಿಯರೇ! ಪುರಂದರನ ನಂದನವನವನ್ನು ನಿಂದಿಸುವಂತಿ ರುವ ಈ ಮನೋಹರವಾದ ಉಪವನವನ್ನು ನೋಡಿದಿರಾ! ಮಲ್ಲಿಗೆಯ ಮೊಗ್ಗುಗಳೆಂಬ ಆಣಿ ಮುತ್ತುಗಳಿಂದಲೂ, ಚಂಪಕ ಕುಸುಮಗಳೆಂಬ ಚಿನ್ನದ ಕುಸರ್ಗಳಿಂದಲೂ, ಸ್ವರ್ಣಚ್ಛಾಯೆಯಿಂದೊಪ್ಪುವ ಲತಾ ವಿತಾನಗಳಿಂದಲೂ, ಅಲಂಕೃತವಾಗಿ, ನವಪಲ್ಲವಗಳಿಂದ ಕೂಡಿದ ವಿವಿಧ ಕುಸುಮಶೋಭಿತ ಲತಾತೋರಣಗಳಿಂದಲೂ, ಸುಂದರತರ ಶುಕಶಾರಿಕಾಕೋಕಿಲಾದಿ ನಾನಾ ಪಕ್ಷಿರಾಜಿಗಳಿಂದಲೂ,ಕಂಗೊಳಿಸುತ್ತ, ಕಾಮಜನಕನ ಕಲ್ಯಾಣಮಂಟಪದಂತೆ ಎಷ್ಟು ಆನಂದಕರವಾಗಿ ಶೋಭಿಸುತ್ತಿರುವುದು!

**ಮುಕ್ತಾವಳಿ**—ಸಖೀ! ನಿಜ! ಕಾಮಜನಕನ ಕಲ್ಯಾಣಮಂಟಪಕ್ಕೆ (ರುಕ್ಮಿಣಿಯನ್ನು ತೋರಿಸಿ) ಲಕ್ಷ್ಮೀದೇವಿಯು ಬಂದಿರುವಳು. ಕಾಮ ಜನಕನು ಮಾತ್ರ ಇನ್ನೂ ಬರಲಿಲ್ಲ.

**ರುಕ್ಮಿಣಿ**—(ಆತ್ಮಗತ) ನನ್ನ ಹೃತ್ಕಮಲವನ್ನು ಸೇರಿರುವ ತ್ರಿಭುವನ ಮೋಹನಾಕಾರನಾದ ಆ ಗೋಕುಲಾನಂದಮೂರ್ತಿಯ ಸಂದರ್ಶನವು ನನಗೆ ಯಾವಾಗ ಲಭಿಸುವುದೋ ಕಾಣೆನಲ್ಲಾ!

**ಸರಸವಾಣಿ**—(ರುಕ್ಮಿಣಿಯನ್ನು ನೋಡಿ) ಸಖೀ! ಈಕಡೆ ನೋಡು. ಪುಷ್ಪಿತ ವಾದ ಈ ಮಲ್ಲಿಕಾಲತೆಯು, ತನ್ನ ಕಡೆಗೆ ಬಾಗಿರುವ ಪಲಾಶವನ್ನು

ಬಿಟ್ಟು ದೂರದಲ್ಲಿರುವ ಮಾಕಂದವೃಕ್ಷವನ್ನಾಶ್ರಯಿಸಲು ಹೇಗೆ ಈಕಡೆ ತಿರುಗಿರುವುದು !

**ರುಕ್ಮಿಣಿ**—ಸಖಿಯರೇ ! ಇದು ಸಹಜವೇ ಅಲ್ಲವೇ ! ಲತಾಕೋಮಲ ಸ್ವಭಾವಕ್ಕೂ ಕಠಿನವಾದ ಪಲಾಶ ಸ್ವಭಾವಕ್ಕೂ ಹೊಂದೀತೇ ?

**ಮುಕ್ತಾವಳಿ**—ಎಂದಿಗೂ ಹೊಂದಲಾರದು. (ಬೇರೆಯಾಗಿ) ಸಖೀ ! ಸರಸ ವಾಣೀ ! ರುಕ್ಮಿಣಿಯು ತನ್ನ ಭಾವವನ್ನು ಹೇಗೆ ವ್ಯಕ್ತಗೊಳಿಸುತ್ತಿರುವಳು ನೋಡಿದೆಯಾ ! ಪಲಾಶಕಠಿಣ ಸ್ವಭಾವವೆಂದರೆ ರಾಕ್ಷಸನಾದ ಶಿಶುಪಾಲನು. ಅವನಿಗೂ ಲತೆಯಂತೆ ಕೋಮಲಳೂ ಮೃದು ಸ್ವಭಾವಳೂ ಆದ ತನಗೂ ಹೊಂದಲಾರದೆಂದು ಸೂಚಿಸುತ್ತಿರುವಳು. ಇದರಿಂದ ಅವರ ಅಣ್ಣನಾದ ರುಕ್ಮಿಯು ಇಷ್ಟದಂತೆ ಆ ಶಿಶುಪಾಲನನ್ನು ವರಿಸಲು ಇವಳಿಗೆ ಅಭಿಮತವಿಲ್ಲವೇ ಇಲ್ಲ. ನಾನು ಇದನ್ನು ಮೊದಲಿನಿಂದಲೂ ಬಲ್ಲೆನು.

**ಸರಸವಾಣಿ**—ನಿಜ ! (ಪ್ರಕಾಶ) ಸಖೀ ! ರುಕ್ಮಿಣೀ ! ಅದು ಪಲಾಶವಾದರೂ ರಾಗರಂಜಿತವಲ್ಲವೇ ! ಲತೆಯು ಅದನ್ನು ಆಶ್ರಯಿಸಲು ಕೊರತೆಯೇನು ?

**ರುಕ್ಮಿಣಿ**—ನಿಜ ! ಪಲಾಶವು ರಾಗರಂಜಿತವಾದರೂ ನಿರ್ಗಂಧಕುಸುಮವೂ ಸಚ್ಛಾಯಾ ರಹಿತವೂ ಆದಕಾರಣ, ಲತಾಕೋಮಲಸ್ವಭಾವಕ್ಕೆ ಅದು ತಿರಸ್ಕೃತವೇ ಸರಿ.

**ಮುಕ್ತಾವಳಿ**—ಹಾಗಾದರೆ ಲತೆಯು ರಸಾಲದ ಕಡೆಗೆ ತಿರುಗಲು ಕಾರಣವೇನು ?

**ರುಕ್ಮಿಣಿ**—ಏನೆಂದರೆ : ಆ ನವ ರಸಾಲವು, ರಸಾಲಯವಾಗಿಯೂ, ರಾಗರಂಜಿತ ಕೋಮಲಪಲ್ಲವವಾಗಿಯೂ, ಘನಚ್ಛಾಯಾ ಪರಿಶೋಭಿತವಾಗಿ ತಾಪ ಪರಿಹಾರಕವಾಗಿಯೂ, ಸರಸಫಲದಾಯಕವೆನಿಸಿರುವುದರಿಂದ ತನಗುಣವಾದುದೆಂದು ಲತೆಯು ಆದನ್ನಾಶ್ರಯಿಸಲು ಆಕಡೆಗೆ ತಿರುಗಿರುವುದು.

**ಸರಸವಾಣಿ**—ನಿಜ ! ನಿಜ ! ಬಹಳ ಚೆನ್ನಾಗಿ ಹೇಳಿದೆ. ಸಖೀ ! ಮುಕ್ತಾ

ವಳೀ! ನೋಡಿದೆಯೋ! ರುಕ್ಮಿಣಿಯು ತನ್ನ ಭಾವವನ್ನು ಎಂತಹ ಶ್ಲೇಷಾಭಿಪ್ರಾಯಗಳಿಂದ ವ್ಯಕ್ತಗೊಳಿಸಿರುವಳು. ಶಿಶುಪಾಲನು ಪಲಾಶದಂತೆ ನಿರ್ಗಂಧಕುಸುಮವಂತೆ; ಸಚ್ಛಾಯಾ ರಹಿತನಂತೆ. ಶ್ರೀಕೃಷ್ಣನು ಮಾಕಂದದಂತೆ ಘನಚ್ಛಾಯಾಪರಿಶೋಭಿತನಂತೆ, ತಾಪಪರಿಹಾರಕನಂತೆ, ರಾಗರಂಜಿತ ಪಲ್ಲವನಂತೆ. ಆದುದರಿಂದ ಶಿಶುಪಾಲನನ್ನೊಪ್ಪದೆ, ಶ್ರೀಕೃಷ್ಣನ ಕಡೆಗೇ ತನ್ನ ಮನವು ತಿರುಗಿರುವುದೆಂದು ಚೆನ್ನಾಗಿ ವ್ಯಕ್ತಗೊಳಿಸುತ್ತಿರುವಳು.

**ಮುಕ್ತಾವಳಿ**—ಸಖೀ! ಇದು ನ್ಯಾಯವೇ ಅಲ್ಲವೇ! ನಾವು ನಮ್ಮ ಸಖಿಗೆ ಹಿತಚಿಂತಕರಾಗಿ ಅವಳ ಇಷ್ಟದಂತೆ ಸಹಾಯಮಾಡಬೇಕಲ್ಲವೇ?

**ಸರಸವಾಣಿ**—ನಿಜ! ನಮ್ಮಿಂದಾಗಬಹುದಾದ ಸಹಾಯವನ್ನು ನಾವು ಮಾಡೋಣ. ಇದರ ಮೇಲೆ ದೈವಘಟನೆ ಇದ್ದಂತಾಗಲಿ.

**ಮುಕ್ತಾವಳಿ**—ಸಖೀ! ರುಕ್ಮಿಣೀದೇವೀ, ನಿನ್ನ ಇಂಗಿತವನ್ನು ನಾವು ಅರಿತೆವು. ಈನ್ನು ಮರೆಮಾಜಬೇಡ. ನೀನು ಶ್ರೀಕೃಷ್ಣಮೂರ್ತಿಯ ರೂಪಲಾವಣ್ಯ ಸದ್ಗುಣಾದಿಗಳನ್ನು ಕೇಳಿ, ಆತನಲ್ಲಿ ಲೀನಚಿತ್ತಳಾದುದನ್ನು ನಾವು ಮೊದಲೇ ತಿಳಿದೆವು. ಆದಕಾರಣ ನಿನಗೆ ಈ ವಿಷಯದಲ್ಲಿ ನಮ್ಮಿಂದಾಗಬೇಕಾದ ಸಹಾಯವೇನು ಹೇಳು. ಅದನ್ನು ನಡೆಯಿಸಲು ಸಿದ್ಧರಾಗಿರುವೆವು.

**ರುಕ್ಮಿಣಿ**—ಪ್ರಿಯ ಸಖಿಯರೇ! ಪರಮಾಪ್ತರೂ ಇಂಗಿತಜ್ಞರೂ ಆದ ನಿಮ್ಮ ಪ್ರೀತಿಗೆ ನಾನು ಕೃತಜ್ಞಳು. ಆ ಮಾಧವನಿಗೆ ನನ್ನಲ್ಲಿ ಅನುರಾಗ ಹುಟ್ಟುವಂತೆ ಮಾಡಲು ಏನಾದರೂ ಉಪಾಯವನ್ನು ಕಲ್ಪಿಸಬೇಕಾದುದೇ ನಿಮ್ಮಿಂದಾಗಬೇಕಾದ ಸಹಾಯವು. (ತೆರೆಯಲ್ಲಿ)

ಕಣಿಯುವ್ವಾ ಕಣಿ, ಕಣಿಯುವ್ವಾ | ಕಣಿಯಿದು ಭಾಗ್ಯದಗಣಿಯುವ್ವಾ ||ಪ||
ಹಣೆಬರೆಹವ ಹೇಳುವೆನವ್ವಾ | ಗುಣವಂತರು ಲಾಲಿಸಿರವ್ವಾ ||ಅ||

**ರುಕ್ಮಿಣಿ**—ಸಖಿಯರೇ! ಯಾರೋ ಕಣಿಹೇಳುವ ಸ್ತ್ರೀಯರ ಧ್ವನಿಯು ಕೇಳುವುದು. ಅವರ ಮೂಲಕ ನನ್ನ ಇಷ್ಟಾರ್ಥವು ಸಿದ್ಧಿಸುವ ವಿಚಾರವನ್ನು ತಿಳಿಯೋಣವೇ?

**ಮುಕ್ತಾವಳಿ**—ಆಗಬಹುದು. ಅದು ಅನುಕೂಲ.
**ರುಕ್ಮಿಣಿ**—ಹಾಗಾದರೆ ಅವರನ್ನು ಕರೆದುಕೊಂಡು ಬಾ ಹೋಗು.
**ಮುಕ್ತಾವಳಿ**—(ಹೋಗಿ ಕೊರವಂಜಿಯರನ್ನು ಕರೆತರುವಳು.)
**ಕೊರವಂಜಿಯರು**— || **ಮಂದಾನಿಲರಗಳೆ** ||

ಕಣಿಯವ್ವಾ ಕಣಿ, ಕಣಿಯವ್ವಾ | ಕಣಿಯಿದು ಭಾಗ್ಯದ ಗಣಿಯವ್ವಾ ||ಪ||
ಹಣೆಬರೆಹವ ಪೇಳುವೆನವ್ವಾ | ಗುಣವಂತರು ಲಾಲಿಸಿರವ್ವಾ ||ಪ||

ಕನಸಿನಫಲಗಳ ನಿಜದರುಹುವುದು | ಮನಸಿನಚಿಂತೆಯ ಪರಿಹಸಿಸುವುದ
ನೆನೆದುದನೆಲ್ಲವ ಪೇಳುವ ಕಣಿಯು | ವನಿತೆಯರೇ ಲಾಲಿಸಿ ಮನದಣಿಯು ||

ಹಿಂದಣಫಲಗಳ ನಿಜವರುಹುವುದು|ಮುಂದಣಸುಖಭಾಗ್ಯವ ಸೂಚಿಪುದು
ಕುಂದದ ವಿಸ್ಮಯ ಬೀರುವ ಕಣಿಯು | ಸುಂದರಿಯರೆ ಲಾಲಿಸಿ ಮನದಣಿಯು

ಭೂತಪಿಶಾಚವ ಪಿಡಿದಾಡಿಸುವ | ಭೀತಿಗಳೆಲ್ಲವ ನಿರದೋಡಿಸುವ |
ರೀತಿಯಪೇಳುವ ಕೊರಚಿಯ ಕಣಿಯು | ಮಾತೆಯರೇ ಕೇಳಿರಿ ಮನದಣಿಯು||

ವಧುವಿಗೆ ಸರಿಯಹ ವರನನು ತಿಳಿಸಿ | ಮದುವೆಗೆ ಪಿರಿದನುಕೂಲತೆ ಸಲಿಸಿ|
ಮದಿರಾಂಬಕಿಯರ ಹರ್ಷಿಪಕಣಿಯು | ಸುದತಿಯರೇ ಲಾಲಿಸಿ ಮನದಣಿಯು

**ರುಕ್ಮಿಣಿ**—(ಆಶ್ಚರ್ಯದಿಂದ) ಓಹೋ! ಇವರನ್ನು ನೋಡಿದರೆ ಬಹಳ ವಿಷಯಗಳನ್ನು ಬಲ್ಲವರೆಂದು ಕಾಣುವುದು.

**ಮಕರವ್ವ**—ಅಯ್ಯೋ ತಾಯಿ, ನಾವಿನ್ನೂ ಏಸೇಸೋ ಕಣೀ ಕಲ್ತೀದ್ದೀವಿ ಕಣವ್ವಾ ಈಟೇ ಅಲ್ಲ. ಕೇಳಿ :

ಮಂದಾನಿಲ || **ರಗಳೆ** ||

ಅಂಜಿಕೆಯಳಿಯುವ ನಂಜಪ್ಪನ ಕಣಿ | ನಂಜನೆ ಹರಿಸುವ ಜುಂಜಪ್ಪನಕಣಿ
ಮಂಜನೆ ಕಳೆಯುವ ಮಂಜಪ್ಪನ ಕಣಿ | ಕೆಂಜೆಡೆಗೆದರಿದ ಕೆಂಚಪ್ಪನ ಕಣಿ ||

ಗಾಳಿಯ ಬಿಡಿಸುವ ಕಾಳವ್ವನ ಕಣಿ | ವ್ಯಾಳವನೋಡಿಪ ಕಾಳಿಂಗನ ಕಣಿ |
ಗೌಳಿಯ ಶಕುನದ ಗೌರವ್ವನ ಕಣಿ | ಕೇಳಿದನುಡಿಯುವ ಕೆಂಚವ್ವನ ಕಣಿ ||

ಮುದ್ದಿನ ಗಂಡನ ಮುಖತೋರಿಸುವ | ಸದ್ದಿಲ್ಲದೆ ಸರಸದೊಳಾಡಿಸುವ |
ಸುದ್ದಿಯ ಪೇಳುವ ಸೊಬಗಿನ ಗಣಿಯು | ಹೊದ್ದಿಕೆಯಾಗುವ ಹೊಸಹೊಸ ಕಣಿಯು ||

ತಾಯಿಾ, ಇನ್ನೂ ಬಲು ಯಿದ್ದಾ ಐತೆ ಕಣವ್ವಾ ನಮ್ತಾವ. ಕೇಳಿ ನೋಡಿ ಯೇಳ್ತೀವಿ, ಮನಶಿನಾಗೆ ಕುರುತುಕೊಂಡದ್ನ 'ಸೈ ಕಣೇ ಕೊರವಂಜೀ' ಅಂಬೋಂಗೆ ಯೇಳ್ತೀನಿ ನೋಡ್ರಿ ನಮ್ಮವ್ವಾ, ಕೇಳ್ರಿ. ಕಣೀ ಕೇಳ್ರಿ, ಪರೀಕ್ಸೆಮಾಡ್ರಿ ಯಿಾ ಕರೀಕೊರವಂಜೀಯು.

**ರುಕ್ಮಿಣಿ**—ಸರಿ. ಸಂತೋಷ! ಹಾಗಾದರೆ, ನನ್ನ ಮನಸ್ಸಿನಲ್ಲಿರುವ ವಿಷಯವು ಅನುಕೂಲಿಸುವುದೋ ಇಲ್ಲವೋ ಹೇಳುವೆಯಾ?

**ಮುಕರವ್ವ**—ವೋ! ಅದ್ಕೇನವ್ವಾ! ನಮ್ದ್ಯಾವರ್ನ ನೆನಿಸಿಕಂಡು, ಜುಂಜಪ್ಪಗೆ ಕೈಮುಗಿದು, ಯೇಳ್ತೀನಿ ನೋಡವ್ವಾ ತಕ್ಸಣಾ ಯೇಳ್ತೀನಿ ಆ ನಿಕ್ಸಯದ ಸೂಕ್ಸ್ಮವ. ಯುಳ್ಡುಪಡಿ ಅಕ್ಕಿ ತರುಸು ಮತ್ತಿಗ; ದಕ್ಸಿಣೆ ಯಿಕ್ಕು.

**ರುಕ್ಮಿಣಿ**—ಸಖೀ, ಸರಸವಾಣೀ, ಪಾಪ! ಅಕ್ಕಿಯನ್ನು ಕೇಳುತ್ತಿರುವಳು; ಅಮ್ಮನನ್ನು ಕೇಳಿ, ಇವಳು ಕೇಳಿದಷ್ಟು ಆಣಿ ಮುತ್ತುಗಳನ್ನು ತಂದು ಕೊಡು. ಓಹೋ! ತಾಳು. (ಕೊರವಂಜಿಯನ್ನು ನೋಡಿ) ಎಲೌ ಕೊರ ವಂಜೀ, ನಿನ್ನ ಶಕುನಕ್ಕೆ ಅಕ್ಕಿಗೆ ಪ್ರತಿಯಾಗಿ ಆಣಿ ಮುತ್ತುಗಳನ್ನು ಕೊಟ್ಟರೆ ಆಗುವುದೇ?

**ಮುಕರವ್ವ**—(ಆಶ್ಚರ್ಯ ಸಂತೋಷಗಳಿಂದ) ಅವ್ವಾ ನಾಕೆಟ್ನೆ! ಮುತ್ತು! ಮುತ್ತು! ಮುತ್ತು ಆಯ್ತದೆ ಕಣವ್ವಾ! ಮುತ್ತು ಸುರಿಯೋಂತಾ ಮಾತ್ನೂ ಆಡಿ ಮುತ್ನೂ ಸುರಿದರೆ ಮತ್ತೇನವ್ವಾ! ನಿಂಗೆ ಮುತ್ತಿ ನಂತಾ ಗಂಡನೇ ಬೊತ್ತಾನೆ. ಯಂಗೆ ಕೊಟ್ಟ್ರೋ ಅಂಗೇ ಮುತ್ತು ಯಿಂದಕೇ ಬೊತ್ತವೆ. ತತ್ತಾರ ನನ್ಕಂದಾ ಮುತ್ನ. ಅಮ್ಮಣ್ಣೀ ತತ್ತಾ, ಬಿರೀನ ತತ್ತಾ! (ಸರಸವಾಣಿ ಹೋಗುವಳು.)

**ಮುಕ್ತಾವಳಿ**—ಕಣಿಯನ್ನು ಮಾತ್ರ ಬಹಳ ಚೆನ್ನಾಗಿ ಹೇಳಬೇಕು.

**ಮುಕರವ್ವ**—ಶಂದಾಕೇಳ್ತೀನೋ! ಇದ್ದುದಿದ್ದಂಗೇ, ಇಲ್ಲದ್ದಿಲ್ದಂಗೇ, ನೆಟ್ಟಗಿರೋದು ನೆಟ್ಟಗೇ, ಸೊಟ್ಟಗಿರೋದು ಸೊಟ್ಟಗೇ, ಒಂದೆಳ್ಳೋಟೂ ಸಟೆ ಬರಾಕಾಗದು; ಅಂಗೇಳ್ತೀನಿ ನೋಡಿಕಳ್ರಮ್ಮಣ್ಣೀ.

**ಸರಸವಾಣಿ**—(ಮುತ್ತನ್ನು ತಂದು ಸುರಿಯುವಳು).

**ಮುಕರವ್ವ**—(ಮೊರದಲ್ಲಿ ಮುತ್ತುಗಳನ್ನು ಹಾಕಿ ಆಡಿಸುತ್ತ)

ಕಣೀ ಕಣೀ, ಸುಕದ ಗಣೀ, ಸುಬದ ಕಣೀ, ಸೃಂಗಾರದ ಕಣಿ, ಬಂಗಾರದ ಕಣಿ, ಸೊಗಸಾದ ಕಣಿ, ಸೋಬಾನದ ಕಣಿ .... ....

ಕಲ್ಲೂರು ಕಾಳವ್ವ, ಮಾಲೂರು ಮಾದವ್ವ, ಬೀರೂರು ಬೀರವ್ವ, ಬಿಚ್ಕೋಲಿ ಗೌರವ್ವ, ಬಾರವ್ವ, ಬಾರವ್ವ ಯೇಳವ್ವ ಕಣಿಯ .... ....

ನಾಗೂರು ನಾಗಪ್ಪ, ಬಾಗೂರು ಬದ್ರಪ್ಪ, ಬೇಗೂರು ಬೆನಕಪ್ಪ, ಬೀರಪ್ಪ ಬಾರಪ್ಪ ಬೈಲುಬಸವಪ್ಪಾ, ಈರಬದ್ರಪ್ಪಾ, ನಂಜಪ್ಪ, ಮಂಜಪ್ಪ, ನಮ್ಮ ಜುಂಜಪ್ಪಾ-ಬಾರಪ್ಪ-ಬಾರಪ್ಪ-ಯೇಳಪ್ಪ ಕಣಿಯ.... ತಾಯಿ ಕೇಳವ್ವಾ ನಮ್ಮ ಜುಂಜಪ್ಪೇಳ್ತಾನೆ .... ....

**೩೩ ಚೌಪದಿ**|| ಕರಿಯ ಹುಡುಗನ ಮೇಲೆ ಮನವು ನಿನಗಿಹುದು |

**ರುಕ್ಮಿಣಿ**—(ಮುಗುಳ್ನಗೆಯಿಂದ ನಾಚಿ ತಲೆ ತಗ್ಗಿಸುವಳು.)

**ಸರಸವಾಣಿ**—ಮುಕ್ತಾವಳೀ, ಆ ಕರಿಯ ಹುಡುಗನು ಯಾರು ತಿಳಿಯಿತೇ?

**ಮುಕ್ತಾವಳಿ**—ಮತ್ತೆ ಯಾರು! ಶ್ರೀಕೃಷ್ಣನೇ!

(ಕೃಷ್ಣ ಮಕರಂದರು ಪರಸ್ಪರ ಮುಖ ನೋಡಿಕೊಳ್ಳುವರು.)

**ಸರಸವಾಣಿ**—ಎಷ್ಟು ನಿಜವಾಗಿ ಹೇಳಿದಳು!

**ಮುಕರವ್ವ**—ವರಿಸಲವನನು ನಿನಗೆ ವಿಘ್ನ ಬರಬಹುದು ||

**ರುಕ್ಮಿಣಿ**—(ಕಾತರಿಸಿ) ಅಯ್ಯೋ! ಮುಂದೆ ಗತಿಯೇನು?

**ಸರಸವಾಣಿ**—ಸಖೀ, ಕಾತರಿಸಬೇಡ, ಮುಂದೆ ಏನನ್ನು ಹೇಳುವಳೋ ಕೇಳೋಣ.

**ಮುಕರವ್ವ**—ಭರದೆ ರಕ್ಕಸನೊಬ್ಬ ನಿನ್ನ ಬಯಸಿಹನು |

**ರುಕ್ಮಿಣಿ**—ಅಯ್ಯೋ! ಇವಳ ಮಾತೆಲ್ಲವೂ ನಿಜವಾಗಿಯೇ ಇರುವುದು!

**ಮುಕ್ತಾವಳಿ**—ಆ ರಕ್ಕಸನು ಯಾರು ತಿಳಿಯಿತೇ, ಸರಸವಾಣೀ!

**ಸರಸವಾಣಿ**—ಸರಿ, ಶಿಶುಪಾಲನೆಂದು ಬೇರೆ ಹೇಳಬೇಕೇ?

**ಮುಕರವ್ವ**—ಪರಿಪರಿಯ ಸಂಧಾನವೆಸಗುತ್ತಲಿಹನು ||

**ರುಕ್ಮಿಣಿ**—ಅಹುದು, ನಿಜ, ನಿಜ, ಕೊರವಂಜೀ ನಿನ್ನ ಮಾತೆಲ್ಲವೂ ಸತ್ಯ, ಮುಂದೆ ಇದು ಹೇಗೆ ಪರಿಣಮಿಸುವುದು ಹೇಳು.

**ಮುಕರವ್ವ**—ನಿನಗವನ ವರಿಪುದಕೆ ಸಮ್ಮತಿಯೆಯಿಲ್ಲ |
ನೆನೆಯುವುದು ಕರಿಯನನೆ ಮನವು ದಿನವೆಲ್ಲ ||

**ರುಕ್ಮಿಣಿ**—ಅಹುದಹುದು. ನಿಜ-ನಿಜ!

**ಮುಕರವ್ವ**—ವಿನಯದಿಂ ಮದುವೆಯಿದು ನಡೆಯುವಂತಿಲ್ಲ |
ಘನಯುದ್ಧವಹುದೇನೊ ದೇವರೇ ಬಲ್ಲ ||

**ರುಕ್ಮಿಣಿ**—ಅಯ್ಯೋ! ಇದರಿಂದ ಯುದ್ಧವು ಬೇರೆ ನಡೆಯುವುದೇ? ಇನ್ನೇನು ಗತಿ? ನನ್ನ ಪ್ರಿಯ ಕೃಷ್ಣಪರಮಾತ್ಮನಿಗೆ ಅಮಂಗಳವಾಗದಿರಲಿ. ಎಲೌ ಕೊರವಂಜೀ, ಯುದ್ಧವಿಲ್ಲದೆ ಮದುವೆಯು ನಡೆಯಬೇಕಾದರೆ ಏನು ಮಾಡಬೇಕು?

**ಮುಕರವ್ವ**—ತಾಯಿೞಾ, ಅಂಗೆ ಸುಕವಾಗಿ ಮದುವೆ ಆಗಬೇಕಾದರೆ, ಆ ಇನ್ನೊಬ್ಬ ದೊರೆಯುವನಲ್ಲಾ! ನಿನ್ನ ಮ್ಯಾಗೆ ಮನಸು ಮಾಡಿಕಂಡಿರೋನು! ಆ ಯಪ್ಪನ್ನ ನೀನು ಒಪ್ಪಿ ಮೊದುವಾದರೆ, ಯಲ್ಲಾ ಸುಕವಾಗಿ ಸಂತೋಸವಾಗಿ ನಡೀತೈತೆಕಣವ್ವಾ.

**ರುಕ್ಮಿಣಿ**—ಅವನು ಹಾಳಾಗಲಿ, ಅವನನ್ನು ನಾನು ಸ್ಮರಿಸಲೀ ಒಲ್ಲೆನು.

**ಮುಕರವ್ವ**—ಅದ್ಯಾಕೆ ನಂತಾಯಿೞಾ ಆಯಪ್ಪ ದೊರೆಯುಲ್ವಾ?

**ರುಕ್ಮಿಣಿ**—ಅವನ ದೊರೆತನವು ಉರಿಯಲಿ! ಅವನು ದೊರೆಯಲ್ಲ, ಭೂಮಿಗೆ ಹೊರೆ.

**ಮುಕರವ್ವ**—ಇಲ್ಕಾಣ ನನ್ನವ್ವಾ! ಆಯಪ್ಪ ಒಳ್ಳೇ ಗಂಡು, ಕಬ್ಬಿಣದ ಗುಂಡು, ಪಟ್ಟಾಗುಂಡು ಕಂಡು, ವಟ್ಟೇ ನೀವಿಕಂಡು, ಮಿಾಶೇ ತೀಡಿಕಂಡು, ಆಶ್ಯಾಗೆ ತಿರಿಕ್ಕಂಡು ಒಳ್ಳೇ ಜಾಲೀಮರದ ತುಂಡಿದ್ದಂಗವನೆ. ಗಂಡೊಂದ್ರೆ ಅವನೇ ಗಂಡು!

**ರುಕ್ಮಿಣಿ**—ನಾನೀ ಹಾಳು ವರ್ಣನೆಯನ್ನು ಕೇಳಲಾರೆನು. ಎಲೌ, ಸಾಕು ನಿನ್ನ ಪ್ರಸಂಗವು; ನಿಲ್ಲಿಸು.

**ಮುಕರವ್ವ**—ಅಮ್ಮಣ್ಣಿಗ್ಯಾಕೋ ಸಿಟ್ಟು ಬೊಂದಂಗೈತೆ. (ಸಖಿಯನ್ನು ನೋಡಿ) ಯಾಕವ್ವಾ ಅಮ್ಮಣ್ಣಿ ಮುನಿಸಿಕೊಂಡಂಗವ್ಳೆ?

**ಸರಸವಾಣಿ**—ಎಲೌ! ಆ ಹಾಳು ರಕ್ಕಸನ ವರ್ಣನೆಯನ್ನು ಬಿಡು. ನೀನು ಹಿಂದೆ ಕರಿಯ ಹುಡುಗನೆಂದು ಹೇಳಿದೆಯಲ್ಲಾ! ಆತನನ್ನು ನಮ್ಮ ಸಖಿಯು ವರಿಸಲು ಸಾಧ್ಯವಾಗುವುದೋ ಇಲ್ಲವೋ ಅದನ್ನು ಹೇಳು.

**ಮಕರವ್ವ**—(ಆಲೋಚಿಸಿ ದೇವರನ್ನು ನೆನೆದಂತೆ ನಟಿಸಿ) ಯವ್ವಾ! ಆ ಕರೀ ವುಡುಗ, ಬಲು ಪೊಳ್ಳುಡುಗಕಣವ್ವಾ! ಇಂತಾ ಗಿಣಿಯಂತಾ ಯೆಣ್ಣಿಗೆ ಆ ಕರೀ ವುಡುಗ್ಯಾತಕಾದಾನು! (ಕಣ್ಣುಮುಚ್ಚಿ ಧ್ಯಾನಿಸಿದಂತೆ ನಟಿಸಿ) ಅದೋ ನೋಡವ್ವ ಆಯಪ್ಪ ನನ್ನೆದಿರಿಂಗೇ ಅವನೆ ಕಣವ್ವಾ, ನನ್ಕಣ್ಣಿಗೇ ಕಾಣತಾ ಅವನೆ. ಅವನು ನೋಡಾಕೆ ಆಕಾಸಾ ಇದ್ದಂಗೆ ಕರ್ರಗಿದ್ರೂ ಕೈಕಾಲು ಮಾತ್ರ ಕೆಂಪಗೆ ಒಳ್ಳೆ ಅಳ್ಳಿ ಸಿಗುರಿದ್ದಂಗವೆ. ಒಂದೊಂದು ಕಣ್ಣು ಒಂದೊಂದು ಶಾರಗಲ, ಅವನ ಅಲ್ಲೋ! ಕಿರುದಾಳಿಂಬ್ರೆ ಬೀಜಿದ್ದಂಗವೆ ಕಣವ್ವಾ! ಅಂದ್ರೆ ಅವನ ಸೊಗಸೇನು! ಸುಮಾನಾ ಯೇನು! ಅವನ ನಡಿಗೇನು! ಅವನ ಬೆಡಗೇನು! ಅವನಂದವೇನು! ಅವನ ಶಂದವೇನು! ಅವನ ಶಕ್ಕಂದೇನು! ಯೇನೇಳ್ಳವ್ವಾ ನಾನು, ಅಂತಾ ಶಂದಾಕವನೆ!

**ರುಕ್ಮಿಣಿ**—(ಆತ್ಮ) ಆಹಾ! ಆ ನನ್ನ ಪ್ರಿಯನ ರೂಪನ್ನು ಇವಳು ಎಷ್ಟು ಚೆನ್ನಾಗಿ ವರ್ಣಿಸುತ್ತಿರುವಳು!

**ಸರಸವಾಣಿ**—ಎಲೌ, ಆತನು ನಮ್ಮ ಸಖಿಯಲ್ಲಿ ಅನುರಾಗವುಳ್ಳವನಾಗಿರುವನೇ?

**ಮಕರವ್ವ**—(ಧ್ಯಾನಿಸಿದಂತೆ ನಟಿಸಿ) ಅವನಿಗೂ ಈ ಯೆಣ್ಣಿನ ವ್ಯಾಗೆ ಬಲು ಮನಸು ಬಿದ್ದೈತೆ ಕಣವ್ವಾ! ಆದರೆ ಆ ಯಿನ್ನೊಬ್ಬಾಯಪ್ಪ, ಈ ಯುವ್ವನ್ನ ಬಿಡೋಂಗಿಲ್ಲ ಕಣವ್ವಾ! ಆ ಯಪ್ಪನೇ ಈ ಯವ್ವನ್ನ ಮೊದು ವ್ಯಾಗೋಕೆ ಬಲು ಸಾಸಾ ಮಾಡ್ತಾ ಅವನೆ. ಈ ಯವ್ವ ಆ ಯಪ್ಪನ ಕೈಗೇ ಸಿಕ್ಕೋದು ನಿಕ್ಸಾಯಾ ಕಣವ್ವಾ! ನಿಕ್ಸಯಾ!

**ರುಕ್ಮಿಣಿ**—ಹಾ! ದೈವವೇ! ನಾನೇಕೆ ಜೀವಿಸಿರುವೆನು. (ಮೂರ್ಛೆಬೀಳುವಳು.)

**ಕೃಷ್ಣ ಮಕರಂದರು**—(ಪರಸ್ಪರ ಮುಖಗಳನ್ನು ನೋಡಿಕೊಳ್ಳುವರು.)

**ಮಕರವ್ವ**—ಯವ್ವಾ? ಯಾಕವ್ವ? ಯಾಕವ್ವ? ಅಂಗೆ ಬಿದ್ದು ಬಿಟ್ಲು ಅಮ್ಮಣ್ಣಿ?

**ಮುಕ್ತಾವಳಿ**—(ರುಕ್ಮಿಣಿಯನ್ನು ಹಿಡಿದು ಸೆರಗಿನಿಂದ ಬೀಸುತ್ತ) ಏತಕ್ಕೂ ಇಲ್ಲ; ಏತಕ್ಕೂ ಇಲ್ಲ.

**ಮುಕರವ್ವ**—ಯವ್ವಾ! ಯದಿರಿಕೋ ಬ್ಯಾಡಾಂತಾ ಯೇಳವ್ವ ಅಮ್ಮಣ್ಣೀಗೆ. (ಕೃಷ್ಣನನ್ನು ತೋರಿಸಿ) ಈ ನಮ್ಮ ಅಮ್ಮಣ್ಣಿಗೂ ಈ ವರಸ ಮದುವೆ ಮಾಡಬೇಕೂಂಬ್ತಾ ಇದ್ದೀನಿ ಕಣವ್ವಾ! ಅದಕೇ ಈ ಅಮ್ಮಣ್ಣಿ ಮುತ್ತು ಕೊಟ್ಟಂಗಾಯ್ತು. ಮದುವೆಗೆ ವಳ್ಳೆ ಸಕುನಾ ಕಣವ್ವಾ ಯಿದು. ಇಬ್ಬರಿಗೂ ಈ ಸಲ ಮೊದುವಾಯ್ತದೆ, ಇದು ನಿಕ್ಸಾಯಾ ಕಣವ್ವಾ! ಅಂಗಂತಾ ಯೇಳಿ ಯೆಬ್ಬಿಸವ್ವಾ ಅಮ್ಮಣ್ಣೀಯ. ನಾವ್ಹೋತೀವಿ. ಮಾದವ್ವಾ ಬಾರೇ ವಾಗಾನ. (ಕೊರವಂಜಿಯರು ಹೋಗುವರು.)

**ಸರಸವಾಣಿ**—ಮುಕ್ತಾವಳೀ, ರುಕ್ಮಿಣಿಯು ಮೂರ್ಛಿತಳಾದಳು. ಕಣಿಯನ್ನು ಕೇಳಿದುದಕ್ಕೆ ಅನರ್ಥವೇ ಆಯಿತು. ಹೋಗಿ ಉಪಚಾರವಸ್ತುಗಳನ್ನು ತಂದು ಸಖಿಯನ್ನು ಉಪಚರಿಸಿ ಎಬ್ಬಿಸೋಣ.

**ಸರಸವಾಣಿ**—ಹಾಗೆಯೇ ಆಗಲಿ. (ಇತರ ಸಖಿಯರೊಡನೆ ಹೊರಡುವಳು.)

**ಶಿಶುಪಾಲ**—(ಪ್ರವೇಶಿಸಿ) ರುಕ್ಮಿಣಿಯು ಈ ವನದಲ್ಲಿರುವಳಂತೆ. ಆಕೆಯ ಬಳಿಗೆ ಹೋಗಿ ಪ್ರೀತಿಮಯವಾದ ಮೃದು ಮಧುರ ವಿನಯೋಕ್ತಿಗಳಿಂದ ಮಾತನಾಡಿಸಿ ನನ್ನನ್ನೇ ವರಿಸಲು ಸಮ್ಮತಿಸುವಂತೆ ಮಾಡಿಕೊಳ್ಳುವೆನು. (ಎದುರಾಗಿ ಬರುತ್ತಿರುವ ರುಕ್ಮಿಣಿಯ ಸಖಿಯರನ್ನು ನೋಡಿ) ಎಲೌ! ನೀವುಗಳೆಲ್ಲಿಗೆ ಹೋಗುತ್ತಿರುವಿರಿ?

**ಸರಸವಾಣಿ**—ದೇಹತಾಪದಿಂದ ಬಳಲಿರುವ ನಮ್ಮ ರುಕ್ಮಿಣೀದೇವಿಗಾಗಿ ಉಪಚಾರ ವಸ್ತುಗಳನ್ನು ತರಲು ಹೋಗುತ್ತಿರುವೆವು.

**ಶಿಶುಪಾಲ**—ನಿಮ್ಮ ಸಖಿಯ ದೇಹತಾಪಕ್ಕೆ ಕಾರಣವೇನು?

**ಸರಸವಾಣಿ**—ಏನಾದರೂ ಆಗಲಿ, ಆ ವಿಚಾರವು ದೊಡ್ಡವರಾದ ತಮಗೇ ತಕ್ಕೆ? ತಾವು ದಯವಿಟ್ಟು ಅಲ್ಲಿಂದಲೇ ಹಿಂದಿರುಗಬೇಕು. ಇಲ್ಲಿ ರಾಜಪುತ್ರಿಯರಿರುವರು.

**ಶಿಶುಪಾಲ**—ಅದಕ್ಕಾಗಿಯೇ ನಾನು ಬಂದಿರುವೆನು. ನಾನು ರಾಜಪುತ್ರಿಯೊಡನೆ ಮಾತನಾಡಬೇಕಾಗಿದೆ. ನನ್ನನ್ನು ತಡೆಯಬೇಡಿ.

**ಸರಸವಾಣಿ**—ಅದು ಸಾಧ್ಯವಲ್ಲ. ತಾವು ಹಿಂದಿರುಗಬೇಕು. ಪರಪುರುಷರಿಗೆ ಇಲ್ಲಿ ಅವಕಾಶವಿಲ್ಲ.

**ಶಿಶುಪಾಲ**—(ಆತ್ಮ) ಈಗಿನ ಸಮಯವನ್ನು ಬಿಟ್ಟರೆ ಇನ್ನು ಇಂತಹ ಸಂಧಿಯು ನನಗೆ ಸಿಕ್ಕುವುದೋ ಇಲ್ಲವೋ! ಆದುದರಿಂದ ಹೇಗಾದರೂ ಇವರನ್ನು ನಿವಾರಿಸಿ ರುಕ್ಮಿಣಿಯೊಡನೆ ಮಾತನಾಡಲೇಬೇಕು. (ಪ್ರಕಾಶಂ) ಎಲೌ; ನನ್ನನ್ನು ಹೀಗೆ ತಡೆಯಬೇಡಿ; ತಡೆದರೆ ನಿಮಗೆ ನಾನು ತಕ್ಕುದನ್ನು ಮಾಡಿ ಮುಂದೆ ಹೋಗಬೇಕಾಗುವುದು.

**ಸರಸವಾಣಿ**—ಆದುದಾಗಲಿ, ನಮ್ಮ ಕರ್ತವ್ಯವನ್ನು ನಾವು ಮಾಡಲೇಬೇಕು. ನೀವು ಮುಂದೆ ಬರಕೂಡದು.

**ಶಿಶುಪಾಲ**—ಬರಕೂಡದೇ? ಹಾಗಾದರೆ ನೀವೇ ಇಲ್ಲಿರಕೂಡದು. (ಎಲ್ಲರನ್ನೂ ಹೊಡೆದು ಓಡಿಸಿ) ಹುಂ, ಹೊರಡಿ.

**ರುಕ್ಮಿಣಿ**—(ಚೇತರಿಸಿಕೊಂಡಿದ್ದು ಕಾತರಳಾಗಿ) ಅಯ್ಯೋ ಸಖಿಯರೇ! ಇನ್ನೇನು ಗತಿ!

**ಶಿಶುಪಾಲ**—(ರುಕ್ಮಿಣಿಯನ್ನು ನೋಡಿ) ಎಲೌ ಮನೋಹರೇ! ಏತಕ್ಕೆ ಕಾತರಿಸುವೆ! ನಿನ್ನ ಸಖಿಯರು ವಿವೇಕವಿಲ್ಲದ ಕನ್ಯೆಯರು! ನಿನ್ನನ್ನು ಪಚರಿಸಿ ನಿನ್ನ ದೇಹತಾಪವನ್ನಾರಿಸಲು ನಾನು ಬಂದಿರುವೆನು.

**ರುಕ್ಮಿಣಿ**—ಅಯ್ಯೋ! ಪರಮಾತ್ಮಾ! ಅನಾಥರಕ್ಷಕಾ, ನನ್ನಲ್ಲಿ ಕರುಣವಿಲ್ಲವೇ! ಮುಂದೇನು ಗತಿ!

**ಶಿಶುಪಾಲ**—೩೪ ಎಲೌ! ಮುಗ್ಧೇ! ಏತಕ್ಕೆ ಹೀಗೆ ವ್ಯರ್ಥವಾಗಿ ಹಲುಬುತ್ತಿರುವೆ? ನಿನ್ನಲ್ಲಿ ನೆಲೆಸಿದ ಮನವುಳ್ಳವನಾಗಿರುವ ರಾಜಾಧಿರಾಜನೂ, ಅಸಮಾನತೇಜನೂ, ಅಮಿತೈಶ್ವರ್ಯಸಾಮ್ರಾಜ್ಯನೂ, ಆದ ಈ ಶಿಶುಪಾಲಭೂಪಾಲನನ್ನು ವರಿಸಲು ಸಮ್ಮತಿಸು. ಹೆದರಬೇಡ. ವಿರಸ ವಿರೋಧಗಳಿಗಿಂತಲೂ ಸರಸ ವಿನೋದವು ನಿನಗೆ ಶ್ರೇಯಸ್ಕರವಲ್ಲವೇ? ಬಾ! ಪ್ರೀತಿಯಿಂದ ಮಾತನಾಡಿ ನನ್ನನ್ನು ವರಿಸುವೆನೆಂದು ನನಗೆ ಅಭಯವನ್ನು ಕೊಡು. ಈ ಶಿಶುಪಾಲನು ನಿನ್ನಲ್ಲಿ ಪ್ರೇಮಭಿಕ್ಷೆಯನ್ನು ಯಾಚಿಸಲು ಬಂದಿರುವನು.

**ರುಕ್ಮಿಣಿ**—(ಆತ್ಮ) ಓಹೋ! ಈ ನೀಚನನ್ನು ಉಪಾಯದಿಂದ ನಿವಾರಿಸಿಕೊಳ್ಳಬೇಕು. (ಪ್ರಕಾಶ) ಎಲೈ! ಶೂರಾಗ್ರಣಿಯೇ! ನನ್ನನ್ನು ಕ್ಷಮಿಸು. ನನ್ನ ಸಖಿಯರೊಡನೆ ಮಾತನಾಡಲು ಒಂದೆರಡು ನಿಮಿಷಗಳು ಮಾತ್ರ ಅವಕಾಶವನ್ನು ಕೊಡು. ಅನಂತರ ನಿನ್ನಭೀಷ್ಟವು ಫಲಿಸುವುದು.

**ಶಿಶುಪಾಲ**—(ಆತ್ಮಗತ) ಓಹೋ! ನನ್ನಭೀಷ್ಟವು ಫಲಿಸುವುದೆಂದು ಹೇಳಿರುವಳು. ಇದರಿಂದ ನನ್ನಲ್ಲಿ ಇವಳಿಗೆ ಅನುರಾಗವಿರಲೇಬೇಕು. (ಪ್ರಕಾಶಂ) ರುಕ್ಮಿಣೀದೇವೀ ಬಹಳ ಸಂತೋಷ. ಹಾಗೆಯೇ ಮಾಡು. ನಾನಿಲ್ಲಿಯೇ ಇರುವೆನು.

**ರುಕ್ಮಿಣಿ**—ಸಂತೋಷ! ಸಖಿಯರೇ ಮುಕ್ತಾವಳಿ, ಸರಸವಾಣಿಯರೇ! (ಒಳಗೆ ಹೋಗುವಳು.)

**ಶಿಶುಪಾಲ**—ರುಕ್ಮಿಣಿಗೆ ನನ್ನಲ್ಲಿ ಅನುರಾಗವಿರಲೇ ಇರುವುದು. ಅಲ್ಲದೆ ರುಕ್ಮಿಯೂ ಸಹ, ಆಕೆಗೆ ನನ್ನನ್ನು ವರಿಸುವಂತೆ ಬೋಧನೆ ಮಾಡಿಯೇ ಇರಬೇಕು. ನಾನು ವೃಥಾ ಸಂದೇಹಗ್ರಸ್ತನಾಗಿದ್ದೆನು.

(ಕೊರವಂಜಿಯರು ಪ್ರವೇಶಿಸುವರು.)

**ಮಾದವ್ವ**—(ಶಿಶುಪಾಲನನ್ನು ನೋಡಿ) ಮಹಾನುಭಾವನಾದ ಶಿಶುಪಾಲ ಭೂಪಾಲನೇ! ನಮ್ಮ ಒಡತಿಯು ನಿನ್ನನ್ನು ಪ್ರೀತಿಯಿಂದ ಆ ಮುಂದೆ ಕಾಣುವ ಲತಾಮಂಟಪಕ್ಕೆ ಕರೆತರುವಂತೆ ಹೇಳಿರುವಳು.

**ಶಿಶುಪಾಲ**—ಬಹಳ ಸಂತೋಷ. ಎಲೌ, ನೀವು ಯಾರು?

**ಮಕರವ್ವ**—ನಾವು, ರುಕ್ಮಿಣೀದೇವಿಯ ದಾಸಿಯರು, ಸಖಿಯರು ಬಳಿಯಲ್ಲಿಲ್ಲದಕಾರಣ, ಆಕೆಯು ನಮ್ಮೊಡನೆ ಹೇಳಿಕಳುಹಿಸಿರುವಳು. (ಕರೆದುಕೊಂಡು ಹೋಗುತ್ತ) ರಾಜೇಂದ್ರನೇ, ಬೇಗನೆ ಹೋಗಿ ಉಪಚಾರ ವಸ್ತುಗಳೊಡನೆ ಆಕೆಯನ್ನು ಕರೆತರುವೆವು. ಸ್ವಲ್ಪ ಈ ವೃಕ್ಷದ ನೆರಳಿನಲ್ಲಿ ನಿಲ್ಲಬೇಕು. (ಹೋಗುವರು.)

**ಶಿಶುಪಾಲ**—(ನಿಂತು) ಆಗಲಿ, ಇದೇ ಸುದಿನವು. ನನ್ನ ಪುಣ್ಯಕ್ಕೆಣೆಯುಂಟೇ! ಸ್ವಯಂವರಕ್ಕೆ ಮೊದಲೇ ನನ್ನನ್ನು ಉಪಚಾರಗಳಿಂದ ಸತ್ಕರಿಸಲೇರ್ಪಡಿಸಿರುವ ಆ ರುಕ್ಮಿಣಿಗೆ ನನ್ನಲ್ಲಿ ಎಷ್ಟು ಅನುರಾಗವಿರ

ಒಹುದು! ಆಹಾ! ಇನ್ನು ಅತ್ಯಾಶೆಯಿಂದ ಬಾಯ್ದೆರೆದುಕೊಂಡಿರುವ ಆ ಗೊಲ್ಲನ ಬಾಯಿಗೆ ಮಣ್ಣು ಬಿದ್ದಂತೆಯೇ ಸರಿ. ನನ್ನ ಅದೃಷ್ಟವೇ ಅದೃಷ್ಟ! ನನ್ನ ಪುಣ್ಯವೇ ಪುಣ್ಯ! ನನ್ನ ಭಾಗ್ಯವೇ ಭಾಗ್ಯ! ಆಹಾಹಾ! ಈ ರಮಣಿಯು ಇಷ್ಟು ಸುಲಭವಾಗಿ ನನಗೆ ಲಭಿಸುವ ಳೆಂದು ನಾನು ತಿಳಿದಿರಲಿಲ್ಲ.

(ಹಿಂದಣಿಂದ ಕೊರವಂಜಿಯರಿಬ್ಬರೂ ಬಂದು ಶಿಶುಪಾಲನನ್ನು ಹಿಡಿದು ಹೊಡೆಯ ಲಾರಂಭಿಸುವರು. ಕೊರವಂಜಿಯ ವೇಷದಿಂದಿದ್ದ ಕೃಷ್ಣನಿಗೂ ಶಿಶುಪಾಲನಿಗೂ ಹೋ ರಾಟವು ನಡೆದು, ಶಿಶುಪಾಲನು ಸೊರಗಿ ಮೂರ್ಛೆ ಬೀಳುವನು.)

**ಸರಸವಾಣಿ**—(ಬಂದು ಮರೆಯಲ್ಲಿ ನೋಡಿ) ಆಹಾ! ಏನಾಶ್ಚರ್ಯವಿದು! ನಾನೀಗಲೇ ಹೋಗಿ ರುಕ್ಮಿಣೀದೇವಿಗೆ ಈ ವಿಚಾರವನ್ನು ತಿಳಿಸುವೆನು.
(ಹೋಗುವಳು.)

**ಮಾದವ್ವ**—ಮಕರವ್ವ ಬಾರೇ, ಇವನನ್ನು ಆ ಮರಕ್ಕೆ ಬಲವಾಗಿ ಬಿಗಿದುಬಿಡೋಣ. (ಶಿಶುಪಾಲನನ್ನು ಮರಕ್ಕೆ ಬಿಗಿದು ಹೋಗುವರು.)

**ಶಿಶುಪಾಲ**—ಅಯ್ಯೋ! (ನರಳುತ್ತ) ಅವಳೆಂತಹ ಹೆಂಗಸು! ಇಂತಹ ಪರಾಕ್ರಮಿಯಾದ ನನ್ನೊಡನೆ ಹೋರಾಡಿ, ನನ್ನನ್ನು ಸೊರಗಿ ಬೀಳು ವಂತೆ ಹೊಡೆದು ಚೆಚ್ಚಿ ಮರಕ್ಕೆ ಬಿಗಿದಿರುವಳಲ್ಲಾ! ಅಯ್ಯೋ! ಅವಳೆಂತಹ ಮಾರಿಯು! ದೈವವೇ! ಹೆಣ್ಣಿಗಾಗಿ ಬಂದು ಮಣ್ಣು ಮುಕ್ಕಿದಂತಾಯಿತೇ! (ಜರಾಸಂಧನೂ ನಾರದನೂ ಪ್ರವೇಶಿಸುವರು.)

**ಜರಾಸಂಧ**—(ಶಿಶುಪಾಲನು ನರಳುವ ಧ್ವನಿಯನ್ನು ಕೇಳಿ) ನಾರದರೇ! ಏನಿದು! ನರಳುವ ಧ್ವನಿಯು! ಶಿಶುಪಾಲನು ಉದ್ಯಾನಕ್ಕೆ ತನ್ನ ಕಾರ್ಯ ಸಾಧನೆಗಾಗಿ ಬಂದಿದ್ದನು. ಅವನೆಲ್ಲಿ? ಕಾಣಲೇ ಇಲ್ಲವಲ್ಲಾ!

**ನಾರದ**—ವನದಲ್ಲಿದ್ದ ರುಕ್ಮಿಣೀದೇವಿಯನ್ನು ಮಾತನಾಡಿಸಲು ಶಿಶು ಪಾಲನು ಬಂದಿದ್ದಂತೆಯೇ ಆ ಭ್ರಾಂತ ಪಶುಪಾಲನೂ ಬಂದಿದ್ದನಂತೆ.

**ಜರಾಸಂಧ**—ಸರಿ, ಹಾಗಾದರೆ ಉಭಯರಿಗೂ ಯುದ್ಧವೇ ನಡೆದಿರಬೇಕು.

**ನಾರದ**—ಶಿಶುಪಾಲನು ಮಹಾ ಬಲಶಾಲಿ. ಆ ಕೃಷ್ಣನನ್ನು ವೈಮುರಿ ಯುವಂತೆ ಪ್ರಹರಿಸಿರಬೇಕು.

**ಜರಾಸಂಧ**—ಸಂದೇಹವೇನು! ಮಲ್ಲ ಯುದ್ಧದಲ್ಲಿ ನಮ್ಮ ಶಿಶುಪಾಲನ ಮುಂದೆ ಆ ಪಶುಪಾಲನು ನಿಂತು ಗೆಲ್ಲಬಲ್ಲನೇ!

**ನಾರದ**—(ಪಕ್ಕದಲ್ಲಿ ನೋಡಿ) ಜರಾಸಂಧಭೂಪಾಲಾ. ಅದೋ! ಅದೋ! ಅಲ್ಲಿ ನೋಡು, ನಮ್ಮನ್ನು ನೋಡಿ ತನ್ನ ಮುಖವನ್ನು ನಾಚಿಕೆಯಿಂದ ಆ ಕಡೆಗೆ ತಿರುಗಿಸಿಕೊಳ್ಳುತ್ತಿರುವನು. ಓಹೋ ಮರಕ್ಕೆ ಬಿಗಿಯಲ್ಪಟ್ಟಿರುವನು!

**ಜರಾಸಂಧ**—ಓಹೋ! ಅವನೇ ಅಲ್ಲವೇ?

**ನಾರದ**—ಅಹುದು. ಅವನೇ! ಅವನೇ! (ಆತ್ಮಗತ) ಶಿಶುಪಾಲನು.

**ಜರಾಸಂಧ**—ಭಲಾ ಶಿಶುಪಾಲ! ಶತ್ರುವನ್ನು ಚೆನ್ನಾಗಿ ಶಿಕ್ಷಿಸಿರುವೆ. ಅವನಿಗೆ ಹಾಗೆಯೇ ಆಗಬೇಕು.

**ನಾರದ**—ನಿಜ! ಅವನಿಗೆ ಹಾಗೆಯೇ ಆಗಬೇಕು. ಬಾ! ಅವನಿಗೆ ಈಗ ಮುಖವನ್ನು ತೋರಿಸು. ತಕ್ಕ ಅವಮಾನವಾಗಲಿ.

**ಜರಾಸಂಧ**—(ಬಳಿಗೆ ಬಂದು ನೋಡಿ ಬೆರಗಾಗಿ) ಯಾರಿವನು? ಶಿಶುಪಾಲನೇ?

**ನಾರದ**—ಆ! ಶಿಶುಪಾಲನೇ? ನಮ್ಮ ಶಿಶುಪಾಲನು? ಚೇದಿರಾಜನು? ನಿನ್ನ ಸ್ನೇಹಿತನು?

**ಜರಾಸಂಧ**—ಅಹುದು. ನಮ್ಮ ಶಿಶುಪಾಲನು! ಶಿಶುಪಾಲಾ! ಏನೀ ದುರವಸ್ಥೆಯು?

**ಶಿಶುಪಾಲ**—ಜರಾಸಂಧಾ! ಏನೆಂದು ಹೇಳಲಿ! ರುಕ್ಮಿಣಿಯೊಡನೆ ಮಾತನಾಡಲು ಇಲ್ಲಿಗೆ ಬಂದೆನು. ಆ ರಮಣಿಯು ನನ್ನನ್ನು ವರಿಸಲೊಪ್ಪಿದಳು. ಯಾವಳೋ ಒಬ್ಬ ಕರಿಯ ಹುಡುಗಿಯು ಆ ರುಕ್ಮಿಣಿಯ ದಾಸಿಯಂತೆ! ಅವಳು ಮತ್ತೊಬ್ಬಳೊಡನೆ ಬಂದು ನನ್ನನ್ನು ಮೋಸದಿಂದ ಹಿಡಿದು ನನ್ನೊಡನೆ ಹೊಡೆದಾಡಿ ಹೋರಾಡಿ ವೈಮುರಿಯುವಂತೆ ನನ್ನನ್ನೆಳೆದು ಹೊಡೆದು, ಅರಜೀವವಮಾಡಿ, ಹೀಗೆ ಮರಕ್ಕೆ ಬಿಗಿದು ಬಿಟ್ಟಿರುವಳು! ಅಯ್ಯೋ! ಅವಳೆಂತಹ ಸಾಹಸಿಯಾದ ಹೆಣ್ಣು! ಎಂತಹ ಮಾರಿಯಂತಹ ಶಕ್ತಿ!!

**ನಾರದ**—ಏನು ! ಏನು ! ಹೆಣ್ಣು ನಿನ್ನನ್ನು ಹೊಡೆದು ಬಿಗಿದಳೇ? ಅಬು ಲೆಯು? ಛಿ! ಛೀ! ಛೀ! ಎಂತಹ ಅನ್ಯಾಯ! ಏನು ಅವಿವೇಕ! ಏನು ಅಚಾತುರ್ಯ! ಎಂತಹ ಅವಮಾನ! ಪಾಪ! ನನಗೆ ಬಹಳ ವ್ಯಸನವಾಗುತ್ತಿರುವುದು.

**ಶಿಶುಪಾಲ**—ಪೂಜ್ಯರೇ! ಕೂಗಬೇಡಿ! ದಯವಿಟ್ಟು ಇದನ್ನು ಬಹಿರಂಗ ಪಡಿಸಬೇಡಿ.

**ಜರಾಸಂಧ**—ಛಿ! ಛೀ! ಶಿಶುಪಾಲಾ! ನೀನು ಮೋಸಹೋದೆ. ಇದೆಲ್ಲವೂ ಆ ನೀಚಕೃಷ್ಣನ ತಂತ್ರವಿರಬಹುದು!

**ಶಿಶುಪಾಲ**—ಇಲ್ಲ. ಕೃಷ್ಣನು ಇಲ್ಲಿಗೆ ಬಂದಿರಲಿಲ್ಲ.

**ನಾರದ**—ಸರಿ! ಹಾಗಾದರೆ ಸರಿ! ಈಗಲೂ ನಡೆದುದಕ್ಕೆ ಚಿಂತಿಸಿ ಫಲವಿಲ್ಲ. ರುಕ್ಮಿಣಿಯು ನಿನ್ನಲ್ಲಿ ಅನುರಾಗಭರಿತಳಾಗಿರುವಷ್ಟೆ? ಬಾ! ಈಗಲೇ ಹೋಗಿ ರುಕ್ಮಿಕುಮಾರನೊಡನೆ ಆಲೋಚಿಸಿ ಕ್ಷಿಪ್ರದಲ್ಲಿ ಸ್ವಯಂವರ ಪ್ರಯತ್ನವನ್ನು ಮಾಡಿ ಬಿಡೋಣ.

**ಜರಾಸಂಧ**—ಆಗಬಹುದು. ಇದೇ ಉತ್ತಮವಾದ ಆಲೋಚನೆ. (ನರಳುವ ಶಿಶುಪಾಲನನ್ನು ಕರೆದುಕೊಂಡು ಹೋಗುವನು.)

**ನಾರದ**—ಈ ದುಷ್ಟರಿಗೆ ಬಾರಿಬಾರಿಗೂ ತಕ್ಕಂತೆ ಪ್ರಾಯಶ್ಚಿತ್ತವಾಗುತ್ತಲೇ ಇರುವುದು. ಇದು ನನಗೆ ಬಹಳ ಸಂತೋಷ. ಧರ್ಮಕ್ಕೆ ಜಯವೂ ಅಧರ್ಮಕ್ಕೆ ಅಪಜಯವೂ ಸಿದ್ಧವಾಗಿಯೇ ಇರುವುವು. ಅದರಲ್ಲಿಯೂ ಸರ್ವಜ್ಞನೂ ಸರ್ವಚೈತನ್ಯಸ್ವರೂಪನೂ ಆದ ಶ್ರೀ ಕೃಷ್ಣಪರಮಾತ್ಮನಲ್ಲಿ ವೈರವನ್ನು ಸಾಧಿಸಿ, ದೈವದ್ವೇಷಿಗಳಾಗಿರುವ ಈ ದೈತ್ಯರಿಗೆ ಜಯವೆಂದರೇನು? ಆಗಲಿ, ಇವರು ಮಾಡುವ ಸ್ವಯಂವರ ಪ್ರಯತ್ನವನ್ನು ಕೃಷ್ಣ ಬಲರಾಮರಿಗೆ ತಿಳಿಸಿ, ಶ್ರೀಕೃಷ್ಣನನ್ನು ಸ್ವಯಂವರಕ್ಕೆ ಕಳುಹಿಸಿ, ಮತ್ತೆ ಇವರುಗಳ ಗರ್ವಭಂಗಮಾಡಿಸುವೆನು.

೩೫ (ಹೋಗುವನು.)

## ತೃತೀಯಾಂಕಂ ಸಂಪೂರ್ಣಂ.

---

# ಚತುರ್ಥಾಂಕಂ

## ದೃಶ್ಯ ೧.—ಕುಂಡಿನ ನಗರದಲ್ಲಿ ಭೀಷ್ಮಕರಾಜನ ಅರಮನೆ ಸ್ವಯಂವರಮಂಟಪ.

(ಜರಾಸಂಧ, ಶಿಶುಪಾಲ, ಸಾಲ್ವ ಮೊದಲಾದ ಅನೇಕ ಮಂದಿ ರಾಜರೂ ರುಕ್ಮಿಯೂ ಭೀಷ್ಮಕರಾಜನೂ ಇರುವರು.)

**ಭೀಷ್ಮಕರಾಜ**—(ರುಕ್ಮಿಯನ್ನು ನೋಡಿ) ಕುಮಾರಾ, ಆಹ್ವಾನಿತರಾದ ಮಹಾ ರಾಜರುಗಳೆಲ್ಲರೂ, ಸ್ವಯಂವರಕ್ಕೆ ಬಂದಿರುವರಲ್ಲವೇ?

**ರುಕ್ಮಿ**—ತಂದೆಯೇ, ಪ್ರಸಿದ್ಧರಾದ ರಾಜರುಗಳೆಲ್ಲರೂ ಬಂದಿರುವರು. ಮಥುರಾನಗರದಿಂದ ಉಗ್ರಸೇನರಾಜನು ಮಾತ್ರ ಬರಲಿಲ್ಲ.

**ಜರಾಸಂಧ**—ವೃದ್ಧನಾದ ತಾನು ಈ ತರುಣೀ ಸ್ವಯಂವರಕ್ಕೆ ಬಂದರೆ ನಗೆಗೇಡಾಗುವುದೆಂದು ಬಾರದೆ ಇರಬಹುದು ಅಲ್ಲವೇ?

**ಶಿಶುಪಾಲ**—ಅವನು ಏತರಿಂದಲಾದರೂ ಬಾರದೆ ನಿಲ್ಲಲಿ! ಆ ಮುದಿ ಗೃಧ್ರವು ಇಂತಹ ಮಹಾಸಭೆಗೆ ಬಂದರೆ ಲಾಭವೇನು? ಬಾರದಿದ್ದರೆ ನಷ್ಟವೇನು? ಅವನಿಗೆ ಪ್ರತಿಯಾಗಿ ಆ ದ್ರೋಹಿಯಾದ ಗೋಪಾಲನು ಬಂದರೆ ಅವನಿಗೆ ತಕ್ಕಂತೆ ಶಿಕ್ಷೆಯನ್ನು ಮಾಡಿ ಕಳುಹಿಸಬೇಕೆಂದಾತುರ ನಾಗಿರುವ ನನ್ನ ಮನೋರಥವು ನೆರವೇರುವುದೋ ಇಲ್ಲವೋ ಕಾಣೆನೇ?

**ಸಾಲ್ವ**—ಮಹಾ ಚಪಲನಾದ ಆ ಕೃಷ್ಣನು ಬಾರದೆ ಎಂದಿಗೂ ನಿಲ್ಲಲಾರನು.

**ಜರಾಸಂಧ**—ಅವನು ಸ್ವಯಂವರಕ್ಕೆ ತಪ್ಪದೆ ಬರುವಂತೆ ಏರ್ಪಡಿಸುವು ದಾಗಿ ನಾರದರು ಹೇಳಿರುವರು. ಆದುದರಿಂದ ಅವನು ಬರಲೇಬರುವನು.

**ರುಕ್ಮಿ**—(ದ್ವಾರದ ಕಡೆ ನೋಡಿ) ಅದೋ! ಅವನೇ ಬಂದಂತಿರುವುದು.

**ಶಿಶುಪಾಲ**—(ಸಂತೋಷೋತ್ಸಾಹಗಳಿಂದ) ಬಂದನೇ ನೀಚನು? ಬರಲಿ, ಬರಲಿ. ರುಕ್ಮೀ, ಜರಾಸಂಧಭೂಪಾಲಾ, ಎಲ್ಲರೂ ಏಳಿ, ಆ ಅವಿವೇಕಿ ಯನ್ನು ತಕ್ಕಂತೆ ವಿಚಾರಿಸಿಕೊಳ್ಳುವ.

**ಶ್ರೀಕೃಷ್ಣನು**—(ಪ್ರವೇಶಿಸುವನು.)

**ಶಿಶುಪಾಲ ಜರಾಸಂಧಾದಿಗಳು**—(ಎದ್ದು ಕತ್ತಿಗಳನ್ನು ಹಿಂದು ನಿಲ್ಲುವರು.)

**ರುಕ್ಮಿ**—ಎಲವೋ! ಗೊಲ್ಲಾ! ಕ್ಷತ್ರಿಯ ಕುಲಾಲಂಕಾರರೆನಿಸಿದ ಮಹಾ ರಾಜರುಗಳು ಸೇರಿರುವ ಪರಮಪವಿತ್ರವಾದ ಈ ಮಹಾಸಭೆಗೆ ಮೂರ್ಧಾಭಿಷಿಕ್ತನಲ್ಲದ ಮತ್ತು ಸ್ತ್ರೀಹತ್ಯ ಗೋಹತ್ಯಾದಿಗಳನ್ನು ಮಾಡಿ ಸೋದರಮಾವನನ್ನೇ ಕೊಂದ ಪರಮಪಾತಕಿಯೂ ಕುಲದ್ರೋಹಿಯೂ ಆದ ನೀನು ಪ್ರವೇಶಿಸಿ, ಈ ಮಂಗಳಕರವಾದ ಸ್ವಯಂವರ ಮಂಟಪ ವನ್ನು ಅಪವಿತ್ರವನ್ನಾಗಿ ಮಾಡಿದೆಯಾ? ನೀಚಾ! ದನಗಳನ್ನು ಕಾದು ಕೊಂಡು ಕಾಡಿನಲ್ಲಿ ಬಿದ್ದಿರಬೇಕಾದ ಅಧಮನಾದ ನೀನು ರಾಜಸಭೆ ಯಲ್ಲಿ ಸನ್ಮಾನಕ್ಕೆ ಅರ್ಹನೆಂದು ಬಂದೆಯಾ? ಆಹ್ವಾನವಿಲ್ಲದೆ ಬರಲು ನಿನಗೆ ನಾಚಿಕೆಯಾಗಲಿಲ್ಲವೇ?

**ಜರಾಸಂಧ**—ನಿನ್ನಿಂದ ತಕ್ಕ ಮರ್ಯಾದೆಯನ್ನು ಹೊಂದಲು ಬಂದಿರುವನು.

**ರುಕ್ಮಿ**—ನಿಜ! ಈ ವಂಚಕನಿಗೆ ತಕ್ಕಂತೆ ಮರ್ಯಾದೆ ಮಾಡಲು ನಾನು ಸಿದ್ಧನಾಗಿಯೇ ಇರುವೆನು.

**ಶಿಶುಪಾಲ**—ಮೊದಲು ಇವನಿಗೆ ನಾನು ಮರ್ಯಾದೆ ಮಾಡುವೆನು. ಅದನ್ನು ಸಹಿಸಿಕೊಂಡು ಇವನು ಉಳಿದರೆ, ನೀವುಗಳೆಲ್ಲರೂ ಅವನಿಗೆ ನಿಮ್ಮನಿಮ್ಮ ಇಷ್ಟಾನುಸಾರವಾಗಿ ಮರ್ಯಾದೆ ಮಾಡಿ (ಕೃಷ್ಣನನ್ನು ನೋಡಿ) ಎಲವೋ ಅಧಮಾ! ನೀನು ನಿನ್ನ ವಿಲಾಸವೈಖರಿಗಳನ್ನು ಬೀರುತ್ತಾ, ಕುಲುಕಿಕೊಂಡು ಬರಲು ಇದು ನಾರಿಯರ ನಾಟ್ಯರಂಗವೆಂದರಿತೆ ಯೇನು? ನೀಚಾ, ನಿನ್ನ ಥಳುಕು ಬೆಳಕಿನ ನಟನೆಗಳಿಂದಲೂ, ಬೇಳುವೆಯ ಬೆಡಗಿನ ನುಡಿಗಳಿಂದಲೂ, ನಮ್ಮನ್ನು ಬೆರಗುಮಾಡಿ ಸಮಾಧಾನಪಡಿಸಲು ಬಂದೆಯಾ? ಅಯೋಗ್ಯಾ! ನಿನ್ನ ಥಳುಕಿಗೆ ಬೆರಗಾಗಿ ನಿನ್ನ ಬಲೆಗೆ ಸಿಕ್ಕಲು ನಾವು ನಾರಿಯರಲ್ಲ.

**ಕೃಷ್ಣ**—ಶಿಶುಪಾಲಾ! ನೀವು ನನ್ನ ಬಲೆಗೆ ಸಿಕ್ಕುವರಲ್ಲ; ಬಲಿಗೆ ಸಿಕ್ಕು ವರು. ಹದಿನೆಂಟಾವೃತ್ತಿ ದಂಡೆತ್ತಿ ಬಂದರೂ ನನ್ನನ್ನು ಗೆಲ್ಲಲಾರದೆ, ನನ್ನ ಪ್ರಹರಗಳಿಂದ ನೊಂದು ಪಲಾಯನವಾಗಿ, ಗೋಮಂತ ಪರ್ವತ ದಲ್ಲಿ ನನ್ನ ಮೋಹನಾಸ್ತ್ರಕ್ಕೆ ಸಿಕ್ಕಿ, ಜ್ಞಾನಶೂನ್ಯರಾಗಿ ಹುಚ್ಚು

ಹುಚ್ಚಾಗಿ ತಂತಮ್ಮಲ್ಲಿಯೇ ಹೊಡೆದಾಡಿ, ನನ್ನ ನಾರಾಯಣಾಸ್ತ್ರದ ಹೊಡೆತದಿಂದ ಕಿರೀಟಗಳನ್ನು ಕಳೆದುಕೊಂಡು, ತಲೆಗಳುಳಿದರೆ ಸಾಕೆಂದು ಯಾರು ಓಡಿಹೋದರೋ, ಅಂತಹ ಮಹಾ ವೀರರಲ್ಲವೇ ನೀವು? ನಿಮ್ಮನ್ನು ನಾರಿಯರೆಂದು ತಾನೇ ಹೇಗೆ ತಿಳಿಯಲಾದೀತು! ನಾರಿಯರಿಗಿರುವ ಶಾಂತತೆಯೂ, ರೂಪಮಾಧುರ್ಯವೂ ವಿವೇಕವೂ, ಮೃದುವಾಕ್ಕುಗಳೂ, ನಯವಾದ ನಡತೆಯೂ, ಗುಣಗ್ರಹಣ ಶಕ್ತಿಯೂ ನಿಮ್ಮಲ್ಲಿರುವುವೆಂದು ಭಾವಿಸಲು ನಾನು ಹುಚ್ಚನೇ? ಪಾಪ! ನಾರಿಯರಿಗಿರುವ ಸದ್ಗುಣಗಳು ನಿಮಗೆ ಎಲ್ಲಿಂದ ಬರಬೇಕು! ನಾನು ನಿಮಗಾಗಿ ಬಂದವನೇ ಅಲ್ಲ. ರುಕ್ಮಿಣೀ ಸ್ವಯಂವರಕ್ಕಾಗಿ ಬಂದೆನು.

**ಶಿಶುಪಾಲ**—ಎಲವೋ! ಅಧಮಾ! ಅವಹೇಳನದ ಮಾತುಗಳಿಂದ ನಮ್ಮನ್ನು ಹಂಗಿಸುವೆಯಾ! ನಿನಗೆ ಮಾತನಾಡಲವಕಾಶವನ್ನು ಕೊಟ್ಟುದೇ ಅನುಚಿತವಾಯಿತು. ರುಕ್ಮೀ, ಜರಾಸಂಧ ಭೂಪಾಲಾ! ಇವನು ಸ್ವಯಂವರಕ್ಕೆ ಬಂದಿರುವನಂತೆ, ಇದೋ, ಇವನಿಗೀಗಲೇ ನನ್ನ ಗದಾಪ್ರಹರದಿಂದ ಮೃತ್ಯುದೇವತೆಯ ಸ್ವಯಂವರವನ್ನು ಮಾಡಿಸುವೆನು. (ಗದೆಯನ್ನೆತ್ತುವಷ್ಟರಲ್ಲಿ)

**ನಾರದ**—(ಪ್ರವೇಶಿಸಿ ಶಿಶುಪಾಲನ ಕೈಯ್ಯನ್ನು ಹಿಡಿದು ನಿಲ್ಲಿಸಿ) ಶಿಶುಪಾಲಾ! ಶಿಶುಪಾಲಾ! ಎಂತಹ ಕಾರ್ಯವನ್ನು ಮಾಡುತ್ತಿರುವೆ? ಮಂಗಳಕರವಾದ ಕಲ್ಯಾಣ ಮಂಟಪದಲ್ಲಿ ನರಹತ್ಯವನ್ನು ಮಾಡುವುದೇ? ಛೀ! ಛೀ! ನಿಲ್ಲಿಸು; ಇದು ಮುಂದಿನ ಶುಭ ಕಾರ್ಯಗಳಿಗೆ ಅಪಶಕುನವಾದಂತಾಗಿ ಸ್ವಯಂವರ ಮಂಟಪವೂ ಅಪರಿಶುದ್ಧವಾಗುವುದು. ಈಗ ಕೃಷ್ಣನು ಬಂದೊಡನೆಯೇ ನೀವೆಲ್ಲರೂ ಎದ್ದುದೇನೋ ನನಗೆ ಪರಮ ಸಂತೋಷ! ಆದರೆ; ಅವನು ಬಂದಿರುವಾಗಲೇ ರುಕ್ಮಿಣೀ ಸ್ವಯಂವರವು ನಡೆಯುವುದಾದರೆ, ಅವಿವೇಕಿಗೆ ಅವಮಾನವಾಗುವುದು; ಆದುದರಿಂದ ಕೃಷ್ಣನು ಇಲ್ಲಿ ಇರುವುದು ಇನ್ನೂ ಅನುಕೂಲವೇ ಅಲ್ಲವೇ? ವಿವಾಹದ ಆದಿಯಲ್ಲಿ ಕಲಹವೇಕೆ? ಆಗುವ ಅವಮಾನವಾದರೆ ಶತ್ರುವು ತಲೆಯೆತ್ತದಂತೆ ಆಗಲೇ ಆಗುವುದು. ಆದುದರಿಂದ, ರುಕ್ಮಿಕುಮಾರಾ, ರುಕ್ಮಿಣಿಗೆ ಹೇಳಬೇಕಾದುದನ್ನು ಹೇಳಿರುವೆಯಷ್ಟೆ! ಆಕೆಯನ್ನು ಕರೆ,

ಇಲ್ಲಿ ನೆರೆದಿರುವ ರಾಜರಲ್ಲಿ ಆಕೆಯು ತಾನಿಷ್ಟಪಟ್ಟವನಿಗೆ ವರಣಮಾಲಿಕೆ ಯನ್ನು ಧರಿಸಲಿ, ಶುಭಕಾರ್ಯಕ್ಕೆ ವಿಘಾತವು ಬರಬಾರದು.

**ರುಕ್ಮಿ**—ಪೂಜ್ಯರೇ! ತಾನಿಷ್ಟಪಟ್ಟವನಿಗಲ್ಲ; ನಾನಿಷ್ಟಪಟ್ಟಂತೆ ನಮ್ಮ ಶಿಶುಪಾಲನನ್ನೇ ವರಿಸಬೇಕೆಂದು ಕಟ್ಟಪ್ಪಣೆ ಮಾಡಿರುವೆನು. ಅವಳನ್ನು ಕರೆತರುವೆನು. (ಹೋಗುವನು.)

**ನಾರದ**—ಸಂತೋಷ! ಶಿಶುಪಾಲಾ! ಜರಾಸಂಧಾ! ಕುಳಿತುಕೊಳ್ಳಿ. ಎಲ್ಲರೂ ಶಾಂತರಾಗಿ, ಕೃಷ್ಣನೂ ಕುಳಿತುಕೊಳ್ಳಲಿ.

(ಎಲ್ಲರೂ ಕುಳಿತುಕೊಳ್ಳುವರು.)

**ಭೀಷ್ಮಕರಾಜ**—(ನಾರದರನ್ನು ನೋಡಿ) ಪೂಜ್ಯರೇ, ಸರಿಯಾದ ಸಮಯಕ್ಕೇ ತಾವು ದಯಮಾಡಿಸಿ, ನಮಗೆ ಬುದ್ಧಿವಾದವನ್ನು ಹೇಳಿ, ಸಭೆಯನ್ನು ಶಾಂತಗೊಳಿಸಿದಿರಿ. ತಮಗೆ ನಾನು ಕೃತಜ್ಞನಾಗಿರುವೆನು.

**ನಾರದ**—ಭೀಷ್ಮಕರಾಜೇಂದ್ರಾ, ವ್ಯರ್ಥವಾದ ದ್ವೇಷಾಸೂಯೆಗಳೂ ಚರ್ಚೆಗಳೂ ಏತಕ್ಕೆ? ಕಾರ್ಯವು ಹೀಗೆಯೇ ನಡೆಯಬೇಕೆಂದು ವಿಧಿ ನಿಯಾಮಕವಾಗಿಯೇ ಇರುವುದು! ಇದಕ್ಕಾಗಿ ಕಂಠಶೋಷಣವೇಕೆ? ರುಕ್ಮಿಣಿಯು ಉತ್ತಮನಾದ ಪರಾಕ್ರಮಶಾಲಿಗೆ ಲಭಿಸುವಳಲ್ಲದೆ ಅವಿ ವೇಕಿಗೂ ಅದೃಷ್ಟಹೀನನಿಗೂ ಲಭಿಸುವಳೇ?

**ಭೀಷ್ಮಕ**—ನಿಜ! ತಾವು ಸರ್ವಜ್ಞರು.

**ಶಿಶುಪಾಲ**—ಪೂಜ್ಯರೇ! ತಮ್ಮ ಸಮಯೋಚಿತ ವಾಕ್ಯಗಳಿಂದ ನನಗೆ ಬಹಳ ಸಂತೋಷವಾಯಿತು.

**ರುಕ್ಮಿ**—(ರುಕ್ಮಿಣಿಯನ್ನು ಕರೆತಂದು) ರುಕ್ಮಿಣೀ, ಇದೋ ನಿನ್ನ ಸ್ವಯಂವರ ಕ್ಕಾಗಿ ಸಕಲ ದೇಶ ಮಹಾರಾಜರುಗಳೂ ಬಂದು ನೆರೆದಿರುವರು.

## ॥ ಸೀಸಪದ್ಯ ॥

ಸಕಲಗುಣ ಗಾಂಭೀರ್ಯ ಸಾಮ್ರಾಜ್ಯ ವೈಭವರು ಸೌರಾಷ್ಟ್ರ ಸಿಂಧು ಕಾಶ್ಮೀರನೃಪರು ॥
ಧನದೇನ ಸಮರಖಿಲ ಧರ್ಮ ಗುಣಶೀಲರೀ ಧೀರ ಕರವೀರ ಮಹಿಶೂರ ನೃಪರು ॥
ವಿಶ್ವಂಭರಾಭರಣೈಶ್ವರ್ಯ ಧರ್ಮಗುಣ ರಂಗಕಾಳಿಂಗ ವರವಂಗ ನೃಪರು ।
ಪರಮ ಸೌಭಾಗ್ಯ ಬಂಧುರ ಯಶೋಭಾಸುರರು ಮಾಳವ ಬಾಹ್ಲೀಕ ಮಹಿಪತಿಗಳು ॥೪೨॥

ಚಕ್ರವರ್ತಿ ಜರಾಸಂಧಭೂಪಾಲನೂ, ಮಹಾ ಪರಾಕ್ರಮಿಯಾದ ಸಾಲ್ವನೂ, ಪ್ರಚಂಡಪ್ರತಾಪಿಯಾದ ಶಿಶುಪಾಲಮಹಾರಾಜನೇ ಮೊದಲಾದ ರಾಜ ಶಿರೋಮಣಿಗಳೆಲ್ಲರೂ ನಮ್ಮ ಹಿತಚಿಂತಕರಾಗಿ ಈ ಕಡೆಯ ಪಙ್ಕ್ತಿಯಲ್ಲಿ ಕುಳಿತಿರುವರು. ಇದೋ, ಈತನೇ ನಮ್ಮ ಪರಮಮಿತ್ರನೂ ಶೌರ್ಯವಿಶಾಲನೂ ಆದ ಶಿಶುಪಾಲಭೂಪಾಲನು ತಿಳಿಯಿತೇ ?

**ಗೀತ** || ಇಂತಿರ್ಪ ವರಭೂಮಿಕಾಂತಮಂಡಲಿಯ |
ಸಂತಸದಿ ನೋಡಿ ಘನಸಾಹಸಾಂಕಿತನಂ ||
ಸ್ವಾಂತದಾಲೋಚಿಸುತೆ ಸಮ್ಮತದೆ ವರಿಸಿ |
ಶಾಂತಿ ಸೌಭಾಗ್ಯಗಳ ನಾಂತು ವರ್ಧಿಸು ನೀಂ ||೪೩||

**ರುಕ್ಮಿಣಿ**—(ಯಾರನ್ನೂ ನೋಡದೆ ಶ್ರೀಕೃಷ್ಣನಿರುವಕಡೆಗೆ ಹೋಗುತ್ತಿರುವಳು.)

**ರುಕ್ಮಿ**—(ತಡೆದು) ಆ ಕಡೆಯೇತಕ್ಕೆ ಹೋಗುವೆ? ಆಕಡೆಯಲ್ಲಿ ಕುಳಿತಿರುವನು, ನಮ್ಮ ಪರಮವಿರೋಧಿಯೂ, ಮಾವನನ್ನು ವಧಿಸಿದ ಮಹಾ ಪಾಪಿಯೂ ಆದ ಪಶುಪಾಲನು. ಅವನ ಮುಖವನ್ನು ನೋಡುವುದೇನು? ಹೀಗೆ ಬಾ.

**ಜರಾಸಂಧ**—(ಕೋಪ ವ್ಯಸನಗಳಿಂದ) ಈ ಅಯೋಗ್ಯನು ತನ್ನ ಮಾವನನ್ನು ವಧಿಸಿದನೆಂಬುದನ್ನು ಕೇಳಿದೊಡನೆಯೇ ನನ್ನೆದೆಗೆ ಶೂಲಪ್ರಯೋಗ ಮಾಡಿದಂತಾಗುವುದು.

**ನಾರದ**—ನಿಜ! ನಿಜ! ಹಾಗೆ ಆಗುವುದೇ ನ್ಯಾಯ!

**ಶಿಶುಪಾಲ**—ರುಕ್ಮೀ! ಕೇಳಿದೆಯಾ! ನಮ್ಮ ಜರಾಸಂಧಭೂಪಾಲನು ಹೇಳಿದುದನ್ನು? ನಮ್ಮೆಲ್ಲರಿಗೂ ತಿಲಕಪ್ರಾಯನಾಗಿಯೂ, ಪ್ರಚಂಡದೋರ್ಬಲನಾಗಿಯೂ ಇರುವ ಇಂತಹ ವೀರಾಗ್ರಣಿಗೆ ಅಳಿಯನೆನಿಸಿದ ಆ ಕಂಸಭೂಪಾಲನನ್ನು ವಧಿಸಿ, ನಮ್ಮ ರಾಕ್ಷಸಪಕ್ಷಕ್ಕೇ ದ್ರೋಹ ಮಾಡಿರುವ ಈ ನೀಚನ ಮೇಲೆ ನನಗಿರುವ ಕ್ರೋಧವನ್ನು ತೀರಿಸಿಕೊಂಡು, ನಮ್ಮ ಜರಾಸಂಧಭೂಪಾಲನ ಮನಸ್ಸಿಗೆ ಶಾಂತಿಯನ್ನುಂಟುಮಾಡಬೇಕಾದುದು ನಮ್ಮ ಮೊದಲನೆಯ ಕರ್ತವ್ಯವು. ಆದಕಾರಣ ಕಂಸ

ವಧೆಯನ್ನು ಮಾಡಿದವನ ವಧೆಯನ್ನು ಮಾಡಲು ಈ ನನ್ನ ಖಡ್ಗವು ಆತುರಪಡುತ್ತಿರುವುದು.

**ಕೃಷ್ಣ**—ಶಿಶುಪಾಲಾ! ಕಂಸನ ದುರ್ವರ್ತನವೇ ಅವನನ್ನು ವಧಿಸಿತು. ಸಕಲರಿಗೂ ತಮ್ಮ ದುಷ್ಟತನವೇ ತಮಗೆ ಮೃತ್ಯುವೆಂಬುದು ಲೋಕಕ್ಕೇ ತಿಳಿದಿರುವಲ್ಲಿ, ಧರ್ಮಪಾಲನೆಯೇ ಕರ್ತವ್ಯವಾಗಿ ಉಳ್ಳ ರಾಜರು ಅದನ್ನು ಮೀರಿದರೆ ಆ ಅಧರ್ಮವೇ ಅವರಿಗೆ ಮೃತ್ಯುವಾಗುವುದು. ಅದರಂತೆ, ಕಂಸನ ಪಕ್ಷದವರಾದ ನಿಮಗೂ ನನ್ನಿಂದ ಹದಿನೆಂಟು ಬಾರಿ ಅಪಜಯವೇ ಉಂಟಾಯಿತು. ಧರ್ಮವಿದ್ದಲ್ಲಿ ಜಯವೂ, ಅಧರ್ಮವಿದ್ದಲ್ಲಿ ಅಪಜಯವೂ ಸಿದ್ಧವಾಗಿರುವುದು. ಇದರಿಂದ ನನ್ನನ್ನು ದೂರುವುದೇತಕ್ಕೆ ?

**ಶಿಶುಪಾಲ**—ನಿನ್ನನ್ನು ದೂರುವುದೇತಕ್ಕೆಂದೆಯೋ? ಪರಮಪಾತಕಿಯಾದ ನೀನು ಮಹಾ ಧರ್ಮಶೀಲನೆಂದು ನಟನೆಮಾಡುತ್ತ ಇಂತಹ ಸ್ವಯಂವರಕ್ಕೆ ಬಹಳ ಘನತೆಯುಳ್ಳವನಂತೆ ಬಂದಿರುವೆಯಲ್ಲವೇ ? ಅದಕ್ಕಾಗಿ.

**ಕೃಷ್ಣ**—ನಾನು ಧರ್ಮಶೀಲನಲ್ಲವೆಂದು ನಿಮ್ಮ ಕಲ್ಪನೆಯಲ್ಲವೇ? ಆಗಲಿ! ಈ ರುಕ್ಮಿಣೀದೇವಿಯು ಪರಮ ವಿದ್ಯಾವಿವೇಕ ಸಂಪನ್ನೆಯೂ, ಗುಣಪಕ್ಷಪಾತಿನಿಯೂ ಆದ ಧರ್ಮಶೀಲೆಯೆಂದಲ್ಲವೇ ನೀನು ಈಕೆಯನ್ನು ಬಯಸಿರುವುದು? ಈಗ ಆಕೆಯೇ ನಮ್ಮ ಧರ್ಮಾಧರ್ಮ ವಿಚಾರದಲ್ಲಿ ಸಿದ್ಧಾಂತಮಾಡಲಿ. ನಾನು ಮಾಡಿದ ಕಂಸವಧೆಯ ಕೃತ್ಯವು ಅಧರ್ಮವಾದುದೆಂದು ನೀವು ಹೇಳುವಂತೆ ಈ ಧರ್ಮಸ್ವರೂಪಿಣಿಯೂ ನಿರ್ಧರಿಸಿ, ತನ್ನ ಹಸ್ತದಲ್ಲಿರುವ ಪುಷ್ಪಮಾಲಿಕೆಯನ್ನು ನಿನಗೇ ಹಾಕುವುದಾದರೆ, ನಾನು ದೋಷಿಯೆಂತಲೂ, ನನ್ನ ಕಾರ್ಯವು ಧರ್ಮವಿರುದ್ಧವಾದುದೆಂತಲೂ ನಾನು ಒಪ್ಪಿ, ನಿಮ್ಮಲ್ಲಿನ ವೈರವನ್ನು ಬಿಟ್ಟುಬಿಡುವೆನು.

**ಜರಾಸಂಧ**—ಎಲವೋ! ಅಧಮಾ! ನೀನು ವೈರವನ್ನು ಬಿಡಬಲ್ಲೆ. ಆದರೆ ನಿನ್ನನ್ನು ಬಿಡುವರು ಯಾರು? ಇದು ಕಲ್ಯಾಣಸಮಯವಾದುದರಿಂದ ಸುಮ್ಮನಿರುವೆನು. ಇಲ್ಲವಾಗಿದ್ದರೆ ಇಲ್ಲಿಯೇ ನಿನ್ನನ್ನು ಛಿದ್ರ ಛಿದ್ರಗಳಾಗಿ ಮಾಡಿಬಿಡುತ್ತಿದ್ದೆನು.

**ಶಿಶುಪಾಲ**—(ರುಕ್ಮಿಣಿಯನ್ನು ನೋಡಿ) ರಾಜಕನ್ಯಾಮಣೀ! ನೀನು ಈ ಗೊಲ್ಲನ ಥಳುಕಿನ ಸವಿನುಡಿಗಳಿಂದ ಬೆರಗಾಗಬೇಡ! ತನ್ನನ್ನು ವರಿಸ ಲೆಂದು, ನಿನ್ನನ್ನು ವಿದ್ಯಾವಿವೇಕ ಸಂಪನ್ನೆಯೆಂದೂ, ಧರ್ಮಸ್ವರೂ ಪಿಣಿಯೆಂದೂ, ಹೊಗಳುತ್ತಿರುವನು. ಇದೆಲ್ಲವನ್ನೂ ನಂಬಿ ಮೋಸ ಹೋದೀಯೆ! ಇಂತಹ ಠಕ್ಕಿಗೂ, ಇವನು ನಮಗೆ ಮಾಡಿರುವ ದ್ರೋಹಕ್ಕೂ, ನಾನು ಈಗಲೇ ಪ್ರತಿಕ್ರಿಯೆಯನ್ನು ಮಾಡಿ ಬಿಡು ತ್ತಿದ್ದೆನು. ಆದರೆ ಲೋಕವಿಖ್ಯಾತ ಲಾವಣ್ಯಪ್ರತಿಮೆಯೂ, ಗುಣ ಶಾಲಿನಿಯೂ ಆದ ನಿನ್ನ ಸ್ವಯಂವರದಲ್ಲಿ ಅಮಂಗಳಕಾರ್ಯವನ್ನು ಮಾಡಿ ನಿನ್ನ ಮನಸ್ಸಿಗೆ ನೋವನ್ನು ತರತಕ್ಕವನು ಈ ಶಿಶುಪಾಲನಲ್ಲ. ಆದುದರಿಂದ ಕೋಮಲ ಕುಸುಮದಂತಿರುವ 'ನಿನ್ನನ್ನು ನಾನು ನೋಯಿಸುವುದಿಲ್ಲ.

**ಕೃಷ್ಣ**—ಶಿಶುಪಾಲಾ! ಒಂದು ವೇಳೆ ರುಕ್ಮಿಣಿಯು ಆ ಸುಮಮಾಲಿಕೆ ಯನ್ನು ನನ್ನ ಕಂಠದಲ್ಲಿಯೇ ಹಾಕಿದರೆ ನೀನೇನು ಮಾಡುವೆ?

**ಶಿಶುಪಾಲ**—ಆಗ ನಿನ್ನ ಕಂಠಕ್ಕೆ ಯಮಪಾಶವೇ ಬಿತ್ತೆಂದು ಎಲ್ಲರಿಗೂ ತೋರಿಸುವೆನು.

**ಕೃಷ್ಣ**—ಸರಿ! ರುಕ್ಮಿಣಿಯ ಹಸ್ತದ ಸುಮಪಾಶವು ನಿನ್ನ ಕಣ್ಣಿಗೆ ಯಮ ಪಾಶವಾಗಿ ಕಂಡರೆ, ರುಕ್ಮಿಣಿಯು ನಿನಗೆ ಮೃತ್ಯುದೇವತೆಯಾಗಿಯೇ ಕಾಣಬೇಕೆಂಬುದು ಸ್ಪಷ್ಟವಾಯಿತಲ್ಲವೇ?

**ಶಿಶುಪಾಲ**—ಅವಳ ಕೈಯಲ್ಲಿಯ ಸುಮಪಾಶವು ನಿನ್ನ ಕಂಠಕ್ಕೆ ಬಿದ್ದಾಗ ಯಮಪಾಶವಾಗುವುದು. ಆಗ ರುಕ್ಮಿಣಿಯು ಯಾರಿಗೆ ಮೃತ್ಯುದೇವ ತೆಯೋ ಲೋಕಕ್ಕೇ ತಿಳಿಯುವುದು. (ರುಕ್ಮಿಣಿಯನ್ನು ನೋಡಿ) ಎಲೌ ರುಕ್ಮಿಣೀ! ಇವನು ಹೇಳಿದಂತೆ ನೀನೇನಾದರೂ ಈ ಗೊಲ್ಲನ ಕಂಠಕ್ಕೆ ಸುಮಹಾರವನ್ನು ಹಾಕಿದರೆ, ಆಕ್ಷಣವೇ ಅವನ ಸಂಹಾರವೇ ಆಗುವುದು. ಆಗ ನೀನು ನನಗೆ ದಾಸಿಯಾಗಬೇಕಾದೀತು! ಎಚ್ಚರಿಕೆ! ಎಲವೋ! ಪಶುಪಾಲಾ! ಈಗಲೇ ಎಚ್ಚರಿಕೆಯನ್ನು ಹೇಳಿರುವೆನು. ಸುಮ್ಮನೆ

ಇಲ್ಲಿಂದಾಚೆಗೆ ಹೊರಡು ; ಸ್ವಯಂವರಕ್ಕೆ ಬಂದುದಕ್ಕೆ ಪ್ರಾಣಹಾನಿಯೇ ಫಲವಾದೀತು.

**ನಾರದ**—ನಿಜ! ನಿಜ! ಅನೇಕರಿಗೆ ಹಾಗೆ ಆಗುವುದೂ ಉಂಟು! ಆಗಲೂಬಹುದು.

**ಕೃಷ್ಣ**—ಶಿಶುಪಾಲಾ! ನೀನು ಹೇಳಿದಂತೆಯೇ ಕೋಮಲೆಯಾದ ರುಕ್ಮಿಣಿಯ ಮನಸ್ಸನ್ನು ನೋಯಿಸಬಾರದೆಂದು ನಾನೂ ಸುಮ್ಮನಿರುವೆನು. ನೀನೂ, ನಿಮ್ಮ ಬಡ ಜರಾಸಂಧನೂ, ನಿಮ್ಮ ಸಾಲ್ವನೂ, ನೀವೆಲ್ಲರೂ ಏಕಕಾಲದಲ್ಲಿ ನನ್ನೊಡನೆ ಯುದ್ಧಕ್ಕೆ ಬಂದರೂ ನಿಮ್ಮೆಲ್ಲರನ್ನೂ ಹಿಡಿದು ಹಿಂಡಿ ಉರುಳಿಸಿ, ನಿಮ್ಮ ರಕ್ತಧಾರೆಗಳಿಂದ ಈ ಸ್ವಯಂವರ ಮಂಟಪಕ್ಕೆ ರಂಗವಲ್ಲಿಯನ್ನು ಬರೆದು, ನರಳುತ್ತಿರುವ ನಿಮ್ಮಗಳ ಕಣ್ಣೆದುರಲ್ಲಿಯೇ ವಿಜಯಲಕ್ಷ್ಮೀ ಸ್ವರೂಪಳಾದ ಈ ರುಕ್ಮಿಣಿಯಿಂದ ಈ ನನ್ನ ಕಂಠದಲ್ಲಿ ಸ್ವಯಂವರ ಪುಷ್ಪಮಾಲಿಕೆಯನ್ನು ಹಾಕಿಸಿಕೊಂಡು, ನಿಮ್ಮ ಕಣ್ಣುಗಳಲ್ಲಿ ಮತ್ತಿಷ್ಟು ರಕ್ತವು ಸುರಿಯುವಂತೆ ಮಾಡಬಲ್ಲೆನು. ಇದಕ್ಕಾಗಿ ರುಕ್ಮಿಣಿಯ ಅಭಿಮತವನ್ನು ತಿಳಿಯುವೆನು. (ರುಕ್ಮಿಣಿಯನ್ನು ನೋಡಿ) ರುಕ್ಮಿಣೀ, ನಿನಗೆ ಶಿಶುಪಾಲನನ್ನು ವರಿಸುವ ಅಭಿಮತವಿದ್ದರೆ, ಆತನ ಕೊರಳಿಗೆ ಸುಮಮಾಲಿಕೆಯನ್ನು ಧರಿಸು; ನನಗೆ ಸಂತೋಷ. ನಾನು ಅದಕ್ಕಾಗಿ ಯಾರಲ್ಲಿಯೂ ವೈರವನ್ನು ಬೆಳೆಯಿಸಲೊಲ್ಲೆನು. ನಿನ್ನ ಮನಸ್ಸಿನ ಸಂತೋಷವೇ ನನಗಾನಂದವು.

**ರುಕ್ಮಿ**—ತಂಗೀ! ರುಕ್ಮಿಣೀ! ಈ ಕೃಷ್ಣನು ಮಹಾ ವಂಚಕನು, ನಿನ್ನ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿಕೊಳ್ಳಲು ಏನೇನೋ ಠಕ್ಕುಗಳನ್ನು ಹೇಳುತ್ತಿರುವನು; ಇದನ್ನು ನೀನು ನಂಬಬೇಡ. ಸುಮ್ಮನೆ ಶಿಶುಪಾಲನನ್ನು ವರಿಸು. (ಕೃಷ್ಣನನ್ನು ನೋಡಿ) ಎಲವೋ! ವಂಚಕಾ! ಈ ಒಣ ಪೌರುಷವೇಕೆ? ಇಲ್ಲಿ ನಿನ್ನ ಸಹಾಯಕರು ಬಹಳ ಮಂದಿ ಇಲ್ಲವೆಂದು ನಮ್ಮ ಪಕ್ಷವನ್ನು ನೋಡಿ ಮನಸ್ಸಿನಲ್ಲಿ ಬೆದರಿ, ಭಯದಿಂದ ತಲ್ಲಣಿಸುತ್ತಿರುವೆಯಾದರೂ, ಈ ನಯ ವಾಕ್ಯಗಳನ್ನಾಡಿ ತಲೆಯನ್ನುಳಿಸಿಕೊಳ್ಳಲು ಪ್ರಯತ್ನಿಸುತ್ತಿರುವೆಯೋ? ಕೇಳು, ಈ ರುಕ್ಮಿಯಿರುವಲ್ಲಿ ರುಕ್ಮಿಣಿಯು ನಿನ್ನನ್ನು ವರಿಸುವುದು ಸ್ವಪ್ನದಲ್ಲಿಯೂ ಸಾಧ್ಯವಲ್ಲವೆಂದು ತಿಳಿ.

**ನಾರದ**—ನಿಜ! ರುಕ್ಮಿಯಿರುವಲ್ಲಿ ಸಾಧ್ಯವಲ್ಲವೇ ಅಲ್ಲ.

**ರುಕ್ಮಿ**—ಅಲ್ಲದೆ, ಶಿಶುಪಾಲನ ಕಂಠದಲ್ಲಿ ರುಕ್ಮಿಣಿಯ ಹಸ್ತದ ಸುಮಮಾಲಿಯು ಬೀಳುವುದಾದರೆ, ಆತನು ಆನಂದಮಗ್ನನಾಗಿ ನಿಸ್ನಲ್ಲಿ ಉದಾಸೀನನಾಗಬಹುದು, ನಾನು ಮಾತ್ರ ನಿನ್ನೊಡನೆ ಯುದ್ಧ ಮಾಡದೆ ಬಿಡಲಾರೆನು. ರುಕ್ಮಿಣೀ, ಈ ದ್ರೋಹಿಯ ಸ್ವಪ್ರಶಂಸೆಗೆ ನೀನು ಬೆರಗಾಗಬೇಡ. ಪ್ರಬಲಪರಾಕ್ರಮಿಯಾದ ಶಿಶುಪಾಲನ ಕಂಠಕ್ಕೆ ವರಣಮಾಲಿಕೆಯನ್ನು ಹಾಕು.

**ರುಕ್ಮಿಣಿ**—ಅಣ್ಣಾ! ದಯವಿಟ್ಟು ನನ್ನ ವಿಜ್ಞಾಪನೆಯನ್ನು ಲಾಲಿಸು, ಧರ್ಮವಿರೋಧಿಯಾದ ಕಂಸನನ್ನು ವಧಿಸಿದ ಈ ಮಹಾನುಭಾವನೇ ಧರ್ಮಸ್ವರೂಪನು. ಅಲ್ಲದೆ ಈತನ ಸಾಮರ್ಥ್ಯವು ನೀವು ಈತನೊಡನೆ ಮಾಡಿದ ಅನೇಕ ಯುದ್ಧಗಳಲ್ಲಿ ನಿಮಗೆ ತಿಳಿದೇಯಿರುವುದಲ್ಲದೆ ಲೋಕವಿಖ್ಯಾತವೂ ಆಗಿರುವುದು. ಈತನ ಸೌಂದರ್ಯ ಸೌಭಾಗ್ಯ ಗಾಂಭೀರ್ಯಾದಿಗಳನ್ನು ನಾನು ಆಗಾಗ ಕೇಳಿ ಆನಂದಪಡುತ್ತಿದ್ದು ದಲ್ಲದೆ ಈಗ ಪ್ರತ್ಯಕ್ಷವಾಗಿಯೇ ನೋಡಿ ಪರವಶಳಾದೆನು. ಮತ್ತು ಈತನು, ತಾನು ನನ್ನನ್ನು ವರಿಸಲು ಬಯಸಿರುವನಾದರೂ, ನನಗೆ ಸಮ್ಮತವಾದರೆ ಶಿಶುಪಾಲನನ್ನು ವರಿಸಬಹುದೆಂದು ಉದಾರ ಮನಸ್ಸಿನಿಂದ ಹೇಳಿರುವನು. ಈ ಶಿಶುಪಾಲರಾಜನಾದರೋ ತನ್ನನ್ನಲ್ಲದೆ ಬೇರೆಯವನನ್ನು ವರಿಸಕೂಡದೆಂದು ಸ್ವಪ್ರತಿಷ್ಠಾ ಪ್ರಶಂಶೆಯಿಂದ ಹೇಳುತ್ತಿರುವನು. ಇದರಿಂದ ಇವರಿಬ್ಬರ ಔದಾರ್ಯ ಗಾಂಭೀರ್ಯಾದಿ ಸದ್ಗುಣಗಳನ್ನೂ ತೋಲನ ಮಾಡಿದಂತಾಯಿತು. ಆದಕಾರಣ ಸೌಂದರ್ಯದಲ್ಲಿಯೂ, ಶೌರ್ಯೌದಾರ್ಯ ಗಾಂಭೀರ್ಯಾದಿಗಳಲ್ಲಿಯೂ, ಶಕ್ತಿ ಯುಕ್ತಿ ಮಹಿಮೆಗಳಲ್ಲಿಯೂ, ಈ ಶಿಶುಪಾಲನಿಗಿಂತಲೂ ಅತ್ಯಧಿಕನೆಂದು ಕಾಣುವ ಈ ಶ್ರೀಕೃಷ್ಣಪರಮಾತ್ಮನನ್ನೇ ವರಿಸಬೇಕೆಂದು ನನ್ನಭಿಮತವಿರುವುದು. (ತಟ್ಟನೆ ಕೃಷ್ಣನ ಬಳಿಗೆ ಬರುವಳು.)

**ಶಿಶುಪಾಲ**—ಛೀ! ಛೀ! ಛೀ!! ಎಂತಹ ಅವಮಾನವಿದು! ಆಗಲಿ! ಆಗಲಿ! ಇವಳು ಆ ಗೊಲ್ಲನನ್ನು ವರಿಸಲಿ; ಆ ಭ್ರಷ್ಟನನ್ನು ಹಿಡಿದು

ಕಡಿದುರುಳಿಸಿ, ಇವಳನ್ನು ನನ್ನ ದಾಸಿಯಾಗಿ ಸೆಳೆದೊಯ್ಯದಿದ್ದರೆ ನಾನು ಶಿಶುಪಾಲನೇ!

**ರುಕ್ಮಿಣಿ**—(ಕೃಷ್ಣನ ಬಳಿಗೆ ಬಂದು) ಮಹಾನುಭಾವಾ! ಅಧರ್ಮಸ್ವರೂಪನಾದ ಕಂಸನನ್ನು ವಧಿಸಿದ ಧರ್ಮಸ್ವರೂಪಾ! ಇದೋ! ಈ .... .... (ಪುಷ್ಪಮಾಲಿಕೆಯನ್ನು ಕೊರಳಿಗೆ ಹಾಕಲು ಎತ್ತುವಷ್ಟರಲ್ಲಿ)

**ರುಕ್ಮಿ**—(ರುಕ್ಮಿಣಿಯನ್ನು ಹಿಂದಕ್ಕೆ ತಳ್ಳಿ) ಛೀ! ಬುದ್ಧಿಹೀನಳೆ! ಆಚೆಗೆ ನಡೆ; ಈ ಪಶುಪಾಲನನ್ನು ವರಿಸಿ ಶಿಶುಪಾಲನಿಗೆ ದಾಸಿಯಾಗುವೆಯಾ? ರಾಜಕುಲಕಲಹಂಸನಾದ ಈ ಭೀಷ್ಮಕರಾಜನ ಪುತ್ರಿಯೂ, ಈ ಪ್ರತಾಪಶಾಲಿ ರುಕ್ಮಿ ಕುಮಾರನ ಸೋದರಿಯೂ ಆದ ನೀನು ಪರದಾಸಿಯಾಗಿ ಪರದೇಶಿಯಾಗುವೆಯಾ? ನಿಲ್ಲು! ದೂರ ನಿಲ್ಲು.

**ರುಕ್ಮಿಣಿ**—ಅಣ್ಣಾ! ಸ್ವಯಂವರದ ಅರ್ಥವೇನೆಂಬುದನ್ನಾಲೋಚಿಸಿರುವೆಯಾ? ನನ್ನಿಷ್ಟ ಬಂದಾತನನ್ನು ವರಿಸುವ ಸ್ವಾತಂತ್ರ್ಯವನ್ನು ನನಗೆ ನೀವು ಕೊಡದಿದ್ದಲ್ಲಿ ಇದು ಎಂತಹ ಸ್ವಯಂವರವು? ನಾನು ಶ್ರೀಕೃಷ್ಣ ಪರಮಾತ್ಮನನ್ನೇ ವರಿಸುವೆನು. ನನ್ನನ್ನು ತಡೆಯಬೇಡ.

**ರುಕ್ಮಿ— ಕಂ||** ಪಗೆಯಂ ವರಿಸಲ್ ಬಗೆವರೆ |
ತೆಗೆತೆಗೆ ಛೀ! ಕುಲಕಳಂಕಳಾದೀ ನಿನ್ನಂ ||
ಮಗಳೆಂದು ಪೋಷಿಸಿದುದುರ |
ಗಿಗೆ ಪಾಲೆರೆದಂತನರ್ಥಕರಮಾಯ್ತುಕಟಾ! ||೪೪||

ಏನು? ದುಷ್ಟೆ! ಅಧಿಕಪ್ರಸಂಗವನ್ನಾರಂಭಿಸಿದೆ? ನಾವಿಷ್ಟು ಮಂದಿ ಮಹಾ ಶೂರಾಗ್ರಣಿಗಳೂ ವಿವೇಕಿಗಳೂ ಇರುವಲ್ಲಿ, ಎಲ್ಲರಿಗಿಂತಲೂ ನೀನೇ ಪ್ರಾಜ್ಞಳೆಂದೊದರುವೆಯಾ? ಛೀ! ನಡೆ! ಕೃಷ್ಣನ ಕಂಠಕ್ಕೆ ಸುಮಮಾಲೆಯು ಬಿದ್ದ ಕ್ಷಣವೇ ಇದೋ! ನನ್ನ ಖಡ್ಗವು ನಿನ್ನ ಕಂಠಕ್ಕೆ ಬೀಳುವದು. (ಕತ್ತಿಯನ್ನು ಹಿರಿಯುತ್ತಿರುವನು.)

**ಭೀಷ್ಮಕ**—ಏನಿದು? ರುಕ್ಮಿ! ರುಕ್ಮೀ! ಸಾಕು! ಸಾಕು!

**ನಾರದ**—(ಎದ್ದು) ಹಾ! ಹಾ! ರುಕ್ಮೀ! ನಿಲ್ಲು! ದುಡುಕಬೇಡ.

**ರುಕ್ಮಿ**—ಮೊದಲು ಇವಳ ಅವಿವೇಕವಾಕ್ಯಗಳನ್ನು ನಿಲ್ಲಿಸಿ, ಅನಂತರ ನಾನು ನಿಲ್ಲುವೆನು.

**ರುಕ್ಮಿಣಿ**—ಅಣ್ಣಾ! ನಾನಾಡುವುದು ವಿವೇಕವಾಗಲಿ, ಅವಿವೇಕವಾಗಲಿ, ಅದರ ಫಲಾನುಭವವು ನನಗೆ ಸೇರಿದುದು. ಅದರ ಪಾಪಪುಣ್ಯಗಳಿಗೆ ನಾನು ಹೊಣೆಯು. ಸ್ವಯಂವರಶಬ್ದಕ್ಕೆ ಅರ್ಥವನ್ನೇ ಆಲೋಚಿಸದಿರುವ ನಿನ್ನ ಉಪದೇಶವನ್ನು ನಾನು ಕೇಳಲೊಲ್ಲೆನು. ನನ್ನಿಷ್ಟ ಬಂದಾತನನ್ನು ನಾನು ವರಿಸುವೆನು.

**ರುಕ್ಮಿ**—ನಿನ್ನಿಷ್ಟಬಂದವನನ್ನು ಅಲ್ಲ, ನನ್ನ ಇಷ್ಟ ಬಂದವನನ್ನೇ ನೀನು ವರಿಸಬೇಕು; (ಕೃಷ್ಣನನ್ನು ನೋಡಿ) ಎಲವೋ ಧೂರ್ತ ಕೃಷ್ಣಾ! ಏತಕ್ಕೆ ಹೇಡಿಯಾಗಿ ಸುಮ್ಮನಿರುವೆ? ಬಾ! ಯುದ್ಧಕ್ಕೆ ನಿಲ್ಲು. ನಿನಗೆ ಶಕ್ತಿಯಿದ್ದರೆ ನನ್ನನ್ನು ಗೆದ್ದು ಇವಳನ್ನು ವರಿಸು, ಇಲ್ಲವಾದರೆ ನನ್ನ ಖಡ್ಗಕ್ಕೆ ತಲೆಯನ್ನೊಡ್ಡು. ಈ ಯುದ್ಧದಲ್ಲಿ ನಿನ್ನ ತಲೆಯಾಗಲಿ, ನನ್ನ ತಲೆಯಾಗಲಿ ನೆಲಕ್ಕೆ ಉರುಳಿದಲ್ಲದೆ ಸ್ವಯಂವರವು ನಡೆಯಲಾರದು.

**ಕೃಷ್ಣ**—ಅಷ್ಟುದೂರವೇತಕ್ಕೆ ಆಲೋಚಿಸುವೆ? ನೋಡುತ್ತಿರು, ನಿನ್ನ ಕಣ್ಣೆದುರಲ್ಲಿಯೇ ರುಕ್ಮಿಣಿಯು ನನ್ನನ್ನು ವರಿಸುವಳು!

**ರುಕ್ಮಿ**—ನಿನಗೆ ಆರೀತಿ ಸ್ವಪ್ನವಾಗಿರಬಹುದು; ಎಲವೋ ನೀಚಾ! ಈ ರುಕ್ಮಿಕುಮಾರನ ಶರೀರದಲ್ಲಿ ಪ್ರಾಣವಾಯುವಿರುವವರೆಗೂ ರುಕ್ಮಿಣಿಯು ಅಧಮನಾದ ನಿನ್ನನ್ನು ವರಿಸುವುದೆಂದರೇನೋ? ಈ ನನ್ನ ಮನದಲ್ಲಿ ಶೌರ್ಯವೂ, ತನುವಿನಲ್ಲಿ ಶಕ್ತಿಯೂ, ಕರದಲ್ಲಿ ಖಡ್ಗವೂ, ಕುಣಿಯುತ್ತಿರುವಲ್ಲಿ, ರುಕ್ಮಿಣಿಯು ಕರದ ಪುಷ್ಪಮಾಲೆಯು ಶಿಶುಪಾಲನಿಗಲ್ಲದೆ ಪಶುಪಾಲನಿಗೆ ಬೀಳುವುದೆಂದರೇನೋ? (ರುಕ್ಮಿಣಿಯನ್ನು ನೋಡಿ) ಎಲೌ ರುಕ್ಮಿಣೀ, ನೀನು ಈ ಗೊಲ್ಲನ ಕಂಠಕ್ಕೆ ಮಾಲಿಕೆಯನ್ನು ಹಾಕುವುದಾದರೆ ಯುದ್ಧದಲ್ಲಿ ನಿಮ್ಮ ಅಣ್ಣನು ಮಡಿದನಂತರವಲ್ಲದೆ, ಮೊದಲೇ ಎಂದಿಗೂ ಹಾಕಲಾರೆ. ಇಲ್ಲವಾದರೆ ಈ ಪಶುಪಾಲನ ಕಂಠಕ್ಕೆ ನನ್ನ ಖಡ್ಗವೂ ಶಿಶುಪಾಲನ ಕಂಠಕ್ಕೆ ನಿನ್ನ ಮಾಲೆಯೂ ಏಕಕಾಲದಲ್ಲಿ ಬೀಳಲೇ ಬೇಕು. (ಕತ್ತಿಯನ್ನೆಳೆಯುವನು.)

**ರುಕ್ಮಿಣಿ**—(ಕೈ ಹಿಡಿದು) ಅಣ್ಣಾ! ನನಗಾಗಿ ನೀನು ಈಷ್ಟು ಕುಪಿತನಾದು ದಕ್ಕಾಗಿ ನನಗೆ ಬಹಳ ವ್ಯಸನವಾಗುತ್ತಿರುವುದು. ಕುಪಿತನಾದ ನಿನ್ನೊಡನೆ ಈ ಸಭಾಮಧ್ಯದಲ್ಲಿ ನಾನು ಪ್ರತಿಮಾತನಾಡುವುದರಿಂದ ಈ ವಿದರ್ಭಕನ್ಯೆಯು ವಿನಯಹೀನಳೆಂದು ಭಾವಿಸಬಾರದು; ನೀನು ಈಗ ಶಾಂತನಾಗು; ನಿನ್ನ ಕೋಪವು ಶಮನವಾಗುವವರೆಗೂ ನಾನು ಯಾರನ್ನೂ ವರಿಸಲೊಲ್ಲೆನು. ಈ ಗಲಭೆಯಲ್ಲಿ ನಡೆದ ಸ್ವಯಂವರವು ಶುಭಕರವಾಗಿ ಪರಿಣಮಿಸಲಾರದು. ಆದುದರಿಂದ ಇನ್ನು ಕೆಲವು ದಿನಗಳ ವರೆಗೆ ಈ ಸ್ವಯಂವರವನ್ನು ನಿಲ್ಲಿಸಿರಿ. ಅನಂತರ ಸಾವಧಾನದಿಂದ ಆಲೋಚಿಸುವ.

**ನಾರದ**—ರುಕ್ಮಿ ಕುಮಾರಾ, ಭೀಷ್ಮಕಭೂಪಾಲಾ! ರುಕ್ಮಿಣಿಯು ಬಾಲೆಯಾದರೂ ಸರಿಯಾದ ವಿನಯ ವಿವೇಕಗಳಿಂದ ಮಾತನಾಡಿರುವಳು. ಆಕೆಯ ಅಭಿಮತದಂತೆ ಈಗ ಸ್ವಯಂವರವನ್ನು ನಿಲ್ಲಿಸುವುದೇ ಉಚಿತವು. (ಜರಾಸಂಧ ಶಿಶುಪಾಲರನ್ನು ನೋಡಿ) ಜರಾಸಂಧ ಶಿಶುಪಾಲರೇ, ಈ ಸಮಯವು ಶುಭಕರವಾಗಿಲ್ಲ. ಆದುದರಿಂದ ಸಮಯವನ್ನು ನೋಡಿ ಮತ್ತೆ ಸ್ವಯಂವರವನ್ನು ನಡೆಯಿಸುವುದುಚಿತವು. ನೀವೂ ಇದಕ್ಕೆ ಒಪ್ಪುವುದರಿಂದ ಮುಂದೆ ಕಾರ್ಯವು ಉಚಿತರೀತಿಯಲ್ಲಿಯೇ ನಡೆಯುವುದು.

**ಜರಾಸಂಧ ಶಿಶುಪಾಲಾದಿಗಳು**—ಆಗಬಹುದು! ಆಗಬಹುದು! ಇದು ನಮ್ಮೆಲ್ಲರಿಗೂ ಸಮ್ಮತವಾಗಿರುವುದು. ಸರಿ; ಸ್ವಯಂವರವು ನಿಂತು ಹೋಯಿತು. ಇನ್ನು ನಾವುಗಳೆಲ್ಲರೂ ಹೊರಡುವ. (ಹೋಗುವರು.)

## ದೃಶ್ಯ ೨—ಕುಂಡಿನನಗರದಲ್ಲಿ ಜರಾಸಂಧ, ಶಿಶುಪಾಲ, ರುಕ್ಮಿ ಪ್ರವೇಶಿಸುವರು.

**ಶಿಶುಪಾಲ**—ಜರಾಸಂಧಭೂಪಾಲಾ; ಈಗ ಸ್ವಯಂವರವು ನಿಂತುಹೋದ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು? ನಮಗೆ ಮನೋರಥ ಭಂಗವಾಗಲಿಲ್ಲವೇ?

**ಜರಾಸಂಧ**—ಸರಿ! ಇದರಲ್ಲಿ ಮನೋರಥಭಂಗವೇನಿರುವುದು? ಈಗ

ರುಕ್ಮಿಣಿಯು ಹಠವನ್ನೇ ಹಿಡಿದಿದ್ದರೆ ಮನೋರಥ ಭಂಗವಾಗುತ್ತಿತ್ತು. ಈಗ ನಿನಗೆ ಆಕೆಯು ವಶವಾಗುವಂತೆ ಮಾಡಿಕೊಳ್ಳಲು ಬೇಕಾದಷ್ಟು ಅವಕಾಶವು ದೊರಕಿತು. ಅಲ್ಲವೇ ರುಕ್ಮೀ ?

**ರುಕ್ಮಿ**—ನಿಜ! ಅದಕ್ಕಾಗಿಯೇ ನಾನು ರುಕ್ಮಿಣಿಯ ಮಾತಿನಂತೆ ಒಪ್ಪಿದೆನು.

**ನಾರದ**—(ಪ್ರವೇಶಿಸಿ) ನಾನೂ ಅದಕ್ಕಾಗಿಯೇ ತಕ್ಕಂತೆ ಹೇಳಿ ಸ್ವಯಂವರ ವನ್ನು ನಿಲ್ಲಿಸಿದೆನು. ಶಿಶುಪಾಲಾ! ರುಕ್ಮೀ! ನೀವುಗಳು ಬಹಳ ಚೆನ್ನಾಗಿ ಪ್ರಸಂಗಮಾಡಿದಿರಿ! ಅಷ್ಟು ಮಾಡಿದುದೇ ಉತ್ತಮವಾಯಿತು. ಇನ್ನು ಮುಂದೆ ಮಾತ್ರ ಉಪಾಯದಿಂದ, ಸರಿಯಾದ ರೀತಿಯಲ್ಲಿ ಕಾರ್ಯವು ನೆರವೇರುವಂತೆ ಸಂಧಾನಮಾಡಿ. ಎಚ್ಚರಿಕೆ.

**ರುಕ್ಮಿ**—ಆಗಲಿ, ರಾಜಕನ್ಯೆಯರಿಗೆ ನಡೆಯಬೇಕಾದ ಸ್ವಯಂವರದ ನೆಪವೂ ಆಯಿತಷ್ಟೆ! ಇನ್ನು ಆ ಸ್ವಯಂವರವೆಂಬ ಹೆಸರೇ ಇಲ್ಲ. ಇನ್ನು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಕ್ರಮವಾಗಿ ವಿವಾಹ ವನ್ನೇ ಏರ್ಪಡಿಸುವೆನು. ಆಗ ರುಕ್ಮಿಣಿಯು ಆ ನೀಚಕೃಷ್ಣನ ಹೆಸರನ್ನೇ ಎತ್ತಲವಕಾಶವಾಗುವುದಿಲ್ಲ.

**ಜರಾಸಂಧ**—ಸರಿ! ಆ ರೀತಿ ಮಾಡುವುದೇ ಉತ್ತಮ.

**ಶಿಶುಪಾಲ**—ನಿಜ! ನಿಜ! ರುಕ್ಮೀ, ಇದೇ ಸಮಯೋಚಿತವಾದ ಆಲೋಚನೆ.

**ನಾರದ**—ಬಹಳ ಸಂತೋಷ. ಇನ್ನು ನಾನು ಹೊರಡುವೆನು.

**ರುಕ್ಮಿ**—ಸಂತೋಷ. ತಾವು ವಿವಾಹಕಾಲಕ್ಕೆ ತಪ್ಪದೆ ದಯಮಾಡಿಸಬೇಕು.

**ನಾರದ**—ಓಹೋ! ಬರಲೇ ಬರುವೆನು. (ಜರಾಸಂಧಾದಿಗಳು ಹೋಗುವರು.)

**ನಾರದ**—ಈ ಅವಿವೇಕಿಗಳು ಸ್ವಯಂವರವನ್ನು ಬಿಟ್ಟು ವಿವಾಹವನ್ನೇರ್ಪ ಡಿಸುವರಂತೆ, ಆಗಲಿ; ಇವರಿಗೆ ತಕ್ಕ ಪ್ರತಿಕ್ರಿಯೆಯನ್ನು ಮಾಡಲು ತಕ್ಕ ಉಪಾಯವು ಸರ್ವಜ್ಞನಾದ ಶ್ರೀಕೃಷ್ಣ ಪರಮಾತ್ಮನಿಗೆ ತಿಳಿಯದೇ! ಆಗಲಿ, ನಾನೀಗಲೇ ಹೋಗಿ ಆ ಮುಕುಂದನಿಗೆ ಈ ವಿಚಾರವನ್ನು ತಿಳಿಸಿ, ಈ ದುರಾತ್ಮರಿಗೆ ಅವಮಾನವೂ ಆಶಾಭಂಗವೂ ಆಗುವಂತೆ

ಮಾಡಿ, ಲೋಕಮಾತೆಯಾದ ರುಕ್ಮಿಣೀದೇವಿಗೂ ಶ್ರೀಕೃಷ್ಣ ಪರಮಾತ್ಮನಿಗೂ ವಿವಾಹಮಂಗಳವು ನಡೆಯುವುದನ್ನು ನೋಡಿ ಆನಂದಪಡುವೆನು. (ಹೋಗುವನು.)

## ದೃಶ್ಯ ೩—ದ್ವಾರಕಾನಗರದ ಅರಮನೆ

(ಬಲರಾಮ ಕೃಷ್ಣರು ಮಾತನಾಡುತ್ತಿರುವರು.)

**ಬಲರಾಮ**—ಕೃಷ್ಣಾ! ತತ್ಕಾಲಕ್ಕೆ ಸ್ವಯಂವರವು ನಿಂತುಹೋಯಿತೆಂದು ಹೇಳಿದೆಯಲ್ಲವೇ? ಅದು ಮತ್ತೆಯಾವಾಗ ನಡೆಯಬೇಕೆಂಬುದನ್ನು ಅವರು ಸೂಚಿಸಲಿಲ್ಲವೇ?

**ಕೃಷ್ಣ**—ಇಲ್ಲ; ರುಕ್ಮಿಣಿಯು ನನ್ನಲ್ಲಿಯ ಪ್ರೇಮವನ್ನು ಬಿಟ್ಟು ಶಿಶುಪಾಲನನ್ನು ವರಿಸಲು ಯಾವಾಗ ಒಪ್ಪುವಳೋ ಆಗ ಏರ್ಪಡಿಸಬೇಕೆಂದು ಅವರ ಉದ್ದೇಶವಿದ್ದಂತೆ ಕಂಡಿತು.

**ಬಲರಾಮ**—ಹಾಗಾದರೆ ರುಕ್ಮಿಣಿಯ ಮನವು ಇನ್ನೂ ಡೋಲಾಯಮಾನವಾಗಿಯೇ ಇರುವುದೆಂದಂತಾಯಿತು?

**ಕೃಷ್ಣ**—ಇಲ್ಲ.

**ಕಂ||** ಲೋಲಾಪಾಂಗದಿನಡಿಗಡಿ |
ಗಾಲೋಕಿಸಿ ನನ್ನನೊಲಿದು ವರಿಸಲ್ ಬಂದಾ ||
ಬಾಲಾಮಣಿ ರುಕ್ಮಿಣಿಗನು |
ಕೂಲಮನಂ ನನ್ನೊಳಿರ್ದುದಂ ನಾನರಿತೆಂ ||೪೫||

ಅವಳೇನೋ ಒಂದೇ ಮನದಿಂದ ಶಿಶುಪಾಲನನ್ನು ತಿರಸ್ಕರಿಸಿ ನನಗೆ ಸುಮಾಲಿಕೆಯನ್ನು ಹಾಕಲು ಬಂದಳು. ಮತ್ತು ಶಿಶುಪಾಲನನ್ನೇ ವರಿಸುವಂತೆ ತನ್ನನ್ನು ಬಲಾತ್ಕರಿಸಿದ ಅಣ್ಣನಾದ ರುಕ್ಮಿಯ ಮಾತಿಗೆ ಒಪ್ಪದೆ, ಸದ್ಯಕ್ಕೆ ಯಾರನ್ನೂ ವರಿಸಲೊಲ್ಲೆನೆಂದು ಹೇಳಿ ಸ್ವಯಂವರವನ್ನು ನಿಲ್ಲಿಸಿದವಳೇ ಆಕೆಯು.

**ಬಲರಾಮ**—ಹೀಗಿರುವಲ್ಲಿ, ಮನಸ್ಸಿನಲ್ಲಿಲ್ಲದ ಮೋಹವು ಬಲಾತ್ಕರಿಸಿದರೆ ಬರುವುದೇ?

**ಕೃಷ್ಣ**—ಇಲ್ಲ. ಆದರಿಂದಲೇ ಮತ್ತೆ ಸ್ವಯಂವರವೇರ್ಪಟ್ಟರೂ ರುಕ್ಮಿಣಿಯು ನನ್ನನ್ನೇ ವರಿಸುವಳೆಂಬ ನಂಬಿಕೆಯು ನನಗೆ ಸಂಪೂರ್ಣವಾಗಿರುವುದು. ನಾನು ಕೊರವಂಜಿಯ ವೇಷದಿಂದ ಹೋಗಿ, ಆಕೆಯನ್ನು ಪರೀಕ್ಷಿಸಿದಾಗ ಆಕೆಯ ಮನವು ನಿಶ್ಚಲವಾಗಿ ನನ್ನಲ್ಲಿಯೇ ನೆಲೆಸಿರುವುದೆಂದು ಸ್ಪಷ್ಟವಾಗಿ ಕಂಡುಬಂದುದರಿಂದಲೇ ನಾನು ಆಹ್ವಾನವಿಲ್ಲದಿದ್ದರೂ ಸ್ವಯಂವರಕ್ಕೆ ಹೋದುದು. ಆಕೆಯ ಸ್ಥಿರ ಸಂಕಲ್ಪವನ್ನು ತಿರುಗಿಸಲು, ರುಕ್ಮಿಗೂ ಸಾಧ್ಯವಾಗುವುದೇ ಇಲ್ಲವೆಂದು ನನ್ನ ನಂಬಿಕೆ.

**ಬಲರಾಮ**—ನೀನೇನೋ ಹೀಗೆ ನಿನಗನುಕೂಲವಾಗಿ ಮಾತನಾಡುವೆ. ಆ ದುಷ್ಟರ ಹಾವಳಿಯಲ್ಲಿ ನಿನ್ನ ಇಷ್ಟಾರ್ಥವು ಫಲಿಸುವುದು ಸಾಧ್ಯವಲ್ಲವೆಂದು ನನಗೆ ಸಂದೇಹವುಂಟಾಗಿರುವುದು.

**ಚಾರ**—ಸ್ವಾಮಿಯವರಿಗೆ ಜಯವಾಗಲಿ; ಕುಂಡಿನನಗರದಿಂದ ಅಗ್ನಿದ್ಯೋತನೆಂಬ ವಿಪ್ರೋತ್ತಮರು ಪತ್ರಹಸ್ತರಾಗಿ ಬಂದು ಸ್ವಾಮಿಯವರ ಸಂದರ್ಶನವನ್ನು ಬಯಸಿ ದ್ವಾರದಲ್ಲಿ ಕಾದಿರುವರು.

**ಕೃಷ್ಣ**—(ಆಶ್ಚರ್ಯಾತುರಗಳಿಂದ) ಏನು? ಕುಂಡಿನನಗರದಿಂದಲೇ? ಮೊದಲು ಅವರನ್ನು ಮರ್ಯಾದೆಯಿಂದ ಬರಮಾಡು.

**ಚಾರ**—ಅಪ್ಪಣೆ. (**ಹೋಗಿ ಕರೆತರುವನು.**)

**ಕೃಷ್ಣಬಲರಾಮರು**—(ಎದ್ದು) ಪೂಜ್ಯರಿಗೆ ವಂದಿಸುವೆವು.

**ಅಗ್ನಿದ್ಯೋತ**—ಶ್ರೇಯೋಸ್ತು, ಶ್ರೇಯೋಸ್ತು. ಶ್ರೀಕೃಷ್ಣರಾಜೇಂದ್ರಾ, ರುಕ್ಮಿಣೀದೇವಿಯವರು ಈ ಪತ್ರವನ್ನು ತಮಗೆ ಅರ್ಪಿಸಿ, ಪ್ರತ್ಯುತ್ತರವನ್ನು ತರುವಂತೆ ನನಗಾಜ್ಞೆ ಮಾಡಿರುವರು. (**ಪತ್ರವನ್ನು ಕೊಡುವನು.**)

**ಕೃಷ್ಣ**—ಓಹೋ! ರುಕ್ಮಿಣೀದೇವಿಯೇ? ಬಹಳ ಸಂತೋಷ! ಅಣ್ಣಾ ಈಗ ವಿಷಯವು ವ್ಯಕ್ತವಾಗುವುದು. (**ತೆಗೆದುಕೊಂಡು ಓದುವನು.**)

**ವೃ||** ತ್ರಿಭುವನ ಮೋಹನಾಂಗ ವಿನತಾರ್ತಿವಿಭಂಗ ಕೃಪಾತರಂಗ ನಾ |
ನಭಯವ ಬೇಡುವೆಂ ಭವದಮೇಯಗುಣಂಗಳ ಕೇಳುತುಂ ಸುಹೃ||
ದ್ವಿಭವವ ಕೋರಿ ತಲ್ಲಣಿಸುತಿರ್ಪೆನುದಾರ ಕೃಪಾಕಟಾಕ್ಷದಿಂ |
ಶುಭಮನೊಡರ್ಚೆ ಪಾಣಿಯವಲಂಬನವಿಾವುದು ಮನ್ಮನೋಹರಾ||

ಕಂ|| ನೀನೆನ್ನ ನೊಲಿದು ವರಿಸುತು
ಮಾನಂದ ಮೊಡರ್ಚದಿರ್ದೊಡಾ ಶಿಶುಪಾಲಂ ||
ತಾನೊಯ್ದು ಪನದರಿಂದೆ ಮ |
ಹಾನಲನಂ ವರಿಪೆನೆಯ್ದಿ ನೆನೆಯುತೆ ನಿನ್ನಂ ||೪೭||

ಅಣ್ಣಾ ! ನೋಡಿದೆಯೋ ! ಈಗಲಾದರೂ ನನ್ನ ಮಾತಿನಲ್ಲಿ ನಿನಗೆ ನಂಬಿಕೆಯುಂಟಾಯಿತೋ ?

**ಬಲರಾಮ**—ಕೃಷ್ಣಾ ! ಈಗ ನನಗೆ ಬಹಳ ಸಂತೋಷವಾಯಿತು.

**ಕೃಷ್ಣ**—ಶಿಒ ಪೂಜ್ಯರೇ ! ಅತ್ಯಾನಂದವಾಯಿತು. (ಪತ್ರವನ್ನು ಬರೆದು) ಶ್ರೀಕೃಷ್ಣನು ನಿನ್ನ ಮನೋಹರವಾದ ಪತ್ರವನ್ನು ನೋಡಿ ಆನಂದಿಸಿ ಅಭಿನಂದಿಸಿದನೆಂತಲೂ, ತಾನು ಕ್ಷಿಪ್ರದಲ್ಲಿಯೇ ಬಂದು ನಿನ್ನಭೀಷ್ಟವನ್ನು ನೆರವೇರಿಸುವೆನೆಂದು ಹೇಳಿದನೆಂತಲೂ ರುಕ್ಮಿಣಿಗೆ ತಿಳಿಸಿ, ಈ ಪತ್ರವನ್ನು ಆಕೆಯ ವಶಕ್ಕೆ ಕೊಡಬೇಕು. (ಕೊಟ್ಟು ತನ್ನ ಕೊರಳಿನ ಮುತ್ತಿನ ಹಾರವನ್ನು ತೆಗೆದು ಅಗ್ನಿದ್ಯೋತನಿಗೆ ಬಹುಮಾನವಾಗಿ ಕೊಡುವನು.)

**ಅಗ್ನಿದ್ಯೋತ**—ಅಪ್ಪಣೆಯಂತೆ. (ಹೋಗುವನು.)

**ನಾರದ**—(ಪ್ರವೇಶಿಸಿ) ಕೃಷ್ಣಾ ! ಕೃಷ್ಣಾ ! ಏನು ಇನ್ನೂ ಇಷ್ಟು ಸಾವಧಾನವಾಗಿ ಕುಳಿತಿರುವೆ ?

**ಕೃಷ್ಣ**—ಓಹೋ ! ಪೂಜ್ಯರೇ, ಆತುರವೇನು ?

**ನಾರದ**—ಆತುರವೇ ? ರುಕ್ಮಿಯು ಸ್ವಯಂವರ ಪ್ರಯತ್ನವನ್ನೇ ನಿಲ್ಲಿಸಿ, ರುಕ್ಮಿಣಿಯನ್ನು ಆ ರಾಕ್ಷಸನಿಗೆ ಕೊಟ್ಟು ವಿವಾಹಮಾಡಲು ಏರ್ಪಡಿಸಿರುವನು. ಶಿಶುಪಾಲನಿಗೆ ಆಗಲೇ ಮದವಣಿಗನ ಶಾಸ್ತ್ರವೂ ಸಹ ನಡೆದಿರುವುದು. ಮುಂದೇನು ಮಾಡಬೇಕೋ ಆಲೋಚಿಸು.

**ಕೃಷ್ಣ**—ಓಹೋ ! ರುಕ್ಮಿಯು ಕಾರ್ಯವನ್ನು ಇಷ್ಟು ತ್ವರೆಗೊಳಿಸಿರುವನೇ?

**ನಾರದ**—ತ್ವರೆಗೊಳಿಸಿರುವನೋ ! ನೀನು ಇನ್ನು ಸ್ವಲ್ಪ ವಿಳಂಬಮಾಡಿದರೆ ಆ ರಾಕ್ಷಸನಿಗೆ ವಿವಾಹವಾಗಿಯೇ ಬಿಡುವುದೋ !

**ಕೃಷ್ಣ**—ಸರಿ ! ಸರಿ ! ಈಗ ರಾಕ್ಷಸನಿಗೆ ಪ್ರಯತ್ನಿಸಿದ ವಿವಾಹವನ್ನು ರಾಕ್ಷಸವಿವಾಹವನ್ನಾಗಿಯೇ ಮಾಡಬೇಕಲ್ಲವೇ ?

**ನಾರದ**—ನಿಜ! ಕಾಲೋಚಿತವನ್ನಾಲೋಚಿಸಿದೆ. ಮೊದಲು ಹೊರಡು.

**ಕೃಷ್ಣ**—**ಕಂ**|| ಪಾರುತೆ ಮಾರುತಜವದಿಂ |
೩೭ ಬೀರುತೆ ಬೀರಮನೆ ವೀರವಾರಮನೆಲ್ಲಂ ||
ವಾರಿಸಿ ಹಾರಿಸಿ ತಲೆಗಳ |
ನಾರಯೆ ನಾರಿಯನೆ ತಂದು ಪರಿಣಯ ಮಾಂಪೆಂ ||೪೮||

ನಾನು ಉಪಾಯದಿಂದ ಆ ಕನ್ಯೆಯನ್ನು ವರಿಸಬೇಕೆಂದಿದ್ದೆನು. ಈಗ ತ್ವರಿತವಾದಕಾರಣ, ಇನ್ನು ಯುದ್ಧವಾಗಲಿ, ಪ್ರಳಯವೇ ಆಗಲಿ, ಮೊದಲು ಹೋಗಿ ಆ ರಮಣಿಯನ್ನಪಹರಿಸಿ ತಂದು ನನ್ನಭೀಷ್ಟವನ್ನು ಸಾಧಿಸಿಕೊಳ್ಳುವೆನು.

**ನಾರದ**—ಭಲಾ! ಕೃಷ್ಣಾ! ಭಲಾ! ಬಹಳ ಸಂತೋಷ! ಹೊರಡು ಮೊದಲು ಹೊರಡು.

**ಕೃಷ್ಣ**—ಅಣ್ಣಾ! ನಮ್ಮ ನಗರವನ್ನು ರಕ್ಷಿಸಿಕೊಂಡಿರುವಂತೆ ಸಾತ್ಯಕಿಗೆ ಹೇಳಿ, ನೀನು ಸಾವಕಾಶವಾಗಿ ಬಾ. ನಾನೀಗಲೇ ಹೋಗಿ ಆ ಕನ್ಯಾಮಣಿಯನ್ನು ಸಾಧಿಸಿ ಆ ಭ್ರಷ್ಟದಾನವರಿಗೂ, ಆ ಅವಿವೇಕಿಯಾದ ರುಕ್ಮಿಗೂ ತಕ್ಕುದನ್ನು ಮಾಡಿ ಬರುವೆನು.

**ಬಲರಾಮ**—ಹಾಗೆಯೇ ಆಗಲಿ. ಶುಭಮಸ್ತು. ನೀನು ಹೊರಡು.

(ಹೋಗುವರು.)

## ದೃಶ್ಯ ೫—ವಿವಾಹಮಂಟಪದ ಮಾರ್ಗ.

**(ರುಕ್ಮಿಯೂ ಭೀಷ್ಮಕರಾಜನೂ ಜರಾಸಂಧಾದಿಗಳೊಡನೆ ಶಿಶುಪಾಲನನ್ನು ವರಪೂಜೆಗಾಗಿ ಕರೆದುಕೊಂಡು ಹೋಗುತ್ತಿರುವರು.)**

**ರುಕ್ಮಿ**—ಚೇದಿರಾಜನೇ!

**ಕಂ**|| ತ್ರಿಜಗನ್ಮೋಹಿನಿ ರುಕ್ಮಿಣಿ |
ವಿಜಯಶ್ರೀರಮಣಿ ವರಿಸಿದಂತಿರೆ ನಿನ್ನಾ ||
ಭುಜಬಲಕೆ ಮೆಚ್ಚಿ ವರಿಸಿದೊ |
ಡಜನವಳಂ ಸೃಜಿಸಿದುದಕೆ ಸಾರ್ಥಕಮಕ್ಕುಂ ||೪೯||

ಸಕಲೈಶ್ವರ್ಯ ಸಂಪನ್ನನೂ, ವಿಭವ ವಿಶಾಲನೂ, ಪರಮ ಪರಾಕ್ರಮಿಯೂ ಆದ ನಿನ್ನನ್ನು ವರಿಸುವ ಆ ರುಕ್ಮಿಣಿಯು ಧನ್ಯಳೇ ಸರಿ! ಅವಳ ಪುಣ್ಯವು ಅಶದ್ಯಶವಾದುದು !

**ಶಿಶುಪಾಲ**—ರುಕ್ಮಿಕುಮಾರಾ, ಮಹಾ ಭೇದೋಪಾಯ ಚತುರನೆನಿಸಿ, ಅರಿಭಯಂಕರ ಪರಾಕ್ರಮಿಯಾದ ಈ ಜರಾಸಂಧಭೂಪಾಲನೂ ನೀನೂ ನನಗೆ ಸಹಾಯಕರಾಗಿರುವುದರಿಂದಲೇ ಈ ಸಂತೋಷವು ಒದಗಿತೆಂದೆಣಿಸಿರುವೆನು. ನಿಮ್ಮ ಪ್ರೀತಿಗಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.

**ನಾರದ**—(ಪ್ರವೇಶಿಸುವನು. ಎಲ್ಲರೂ ವಂದಿಸುವರು.) ಮಂಗಳವಾಗಲಿ.

**ಶಿಶುಪಾಲ**—ಸ್ವಾಮಿ ! ಈ ಶುಭಕಾಲಕ್ಕೆ ಸರಿಯಾಗಿ ಪೂಜ್ಯರಾದ ತಮ್ಮಾಗಮನವು ನಮಗೆ ಶ್ರೇಯಸ್ಕರವು.

**ನಾರದ**—ಶೂರರಿಗೆ ಶ್ರೇಯಸ್ಸನ್ನೇ ನಾವು ಯಾವಾಗಲೂ ಬಯಸುತ್ತಿರುವೆವು. ಆದರಿಂದಲೇ ನಿಮ್ಮ ಸಂತೋಷವನ್ನು ನೋಡಲಾತುರನಾಗಿ, ಒಂದು ನೂತನ ವಾರ್ತೆಯನ್ನು ನಿಮಗೆ ತಿಳಿಸಲು ಬಂದೆನು.

**ಶಿಶುಪಾಲ**—ಬಹಳ ಸಂತೋಷ. ಜರಾಸಂಧಭೂಪಾಲಾ ! ನಾರದರು ಎಂತಹ ಹಿತರು ! ಆಪ್ತರು ! (ನಾರದರನ್ನು ನೋಡಿ) ಪೂಜ್ಯರೇ ! ವಿಚಾರವೇನು ? ಅಪ್ಪಣೆ ಕೊಡಿಸಬೇಕು.

**ನಾರದ**—ಏನೆಂದರೆ, ರುಕ್ಮಿಣಿಯನ್ನು ಶ್ರೀಕೃಷ್ಣನು ಬಯಸಿ, ಮತ್ತೊಂದು ಸ್ವಯಂವರವು ನಡೆಯುವುದೆಂದು ನಿರೀಕ್ಷಿಸಿಕೊಂಡಿರುವನು.

**ಶಿಶುಪಾಲ**—(ನಕ್ಕು) ಭಲಾ ! ಭಲಾ ! ಜರಾಸಂಧಭೂಪಾಲಾ ! ಕೇಳಿದೆಯಾ ವಿಷಯವನ್ನು ?

**ಜರಾಸಂಧ**—(ನಕ್ಕು) ಕೇಳಿದೆನು. ಆಹಾ ! ನಮ್ಮ ಶಿಶುಪಾಲನಿಗೆ ನಿಶ್ಚಿತಳಾಗಿರುವ ರುಕ್ಮಿಣಿಯು ಪಶುಪಾಲನಿಗೆ ಲಭಿಸುವಳಲ್ಲವೇ ? ಚೆನ್ನಾಗಿ ಲಭಿಸುವಳು ! ಬಹಳ ಚೆನ್ನಾಗಿ ಲಭಿಸುವಳು !

**ರುಕ್ಮಿ**—ಬಯಕೆಗೇನು ? ಯಾರು ಯಾವುದನ್ನು ಬೇಕಾದರೂ ಬಯಸಬಹುದು. ಲಭಿಸುವುದು ತಾನೇ ಅಸಾಧ್ಯ !

**ಶಿಶುಪಾಲ**—ಪೂಜ್ಯರೇ! ರಾಜಕನ್ಯಾಮಣಿಯಾದ ರುಕ್ಮಿಣಿಯು ಇನ್ನು ಈ ಶಿಶುಪಾಲನಿಗೇ ಲಭಿಸುವಳಲ್ಲದೆ ಪಶುಪಾಲನಿಗೆ ಲಭಿಸುವ ಸಂಭವವುಂಟೇ?

**ನಾರದ**—ಛೀ! ಛೀ! ಎಲ್ಲಿಯ ಮಾತು! ಎಲ್ಲಿಯ ಮಾತು!! ಯಾರೊಡವೆಯು ಯಾರಿಗೆ ಲಭಿಸೀತು! ಚಾಪಲ್ಯದಿಂದ ಹುಚ್ಚುಹತ್ತಿ ನೆಗೆದಾಡಿದ ಮಾತ್ರಕ್ಕೇ ಅಸಾಧ್ಯವಾದ ಇಷ್ಟಾರ್ಥವು ಅವಿವೇಕಿಗಳಿಗೆ ಕೈಗೂಡುವುದೇ? ಯಾವ ವಸ್ತುವು ಯಾರನ್ನು ಸೇರಬೇಕೋ ಅವರನ್ನು ತಾನೇ ಸೇರುವುದು!

**ರುಕ್ಮಿ**—ಪೂಜ್ಯರೇ! ನಿಜ! ನಿಜ! ಬಹಳ ಚೆನ್ನಾಗಿ ಅಪ್ಪಣೆ ಕೊಡಿಸಿದಿರಿ. ನಮ್ಮ ಭಾವ ಶಿಶುಪಾಲನಿಗೆ ಮದವಣಿಗನ ಶಾಸ್ತ್ರವು ನಡೆದು ಲಗ್ನ ಕಾರ್ಯಕ್ಕೆ ಎಲ್ಲವೂ ಸಿದ್ಧವಾಗಿರುವುದು. ಇನ್ನೂ ಆ ಹುಚ್ಚನಿಗೆ ಚಪಲವೇ! ನಾನು ಮಾಡಿರುವ ಸಂಕಲ್ಪವೇನು! ಆ ಅವಿವೇಕಿಯ ಆಲೋಚನೆಯೇನು! ಹುಚ್ಚನು! ಹುಚ್ಚನು!! (ನಗುವನು.)

**ನಾರದ**—ನಿಜ! ನಿಜ! ನಿನ್ನ ಸಂಕಲ್ಪವೇ ಒಂದು, ಅವನ ಸಂಕಲ್ಪವೇ ಒಂದು. ಹುಚ್ಚರು ಮನಸ್ಸು ಬಂದಂತೆ ಅವಿವೇಕಾಲೋಚನೆಗಳನ್ನು ಮಾಡಿ, ಕಡೆಗೆ ಅವಮಾನಪಟ್ಟು, ಅಪಕೀರ್ತಿಯನ್ನು ಪಡೆದು, ಎಲ್ಲರಿಂದಲೂ ನಗಿಸಿಕೊಂಡು, ಭಗ್ನಮನೋರಥರಾಗಿ, ಕಡೆಗೆ ತಮ್ಮ ವೈರಿಗಳಿಗೇ ಶರಣಾಗತರಾಗಿ, ಅವರು ಹೇಳಿದಂತೆ ಕೇಳಿ, ಅವರು ಮಾಡಿದ ಶಿಕ್ಷೆಯನ್ನನುಭವಿಸಿ, ಬದುಕಿದ್ದರೂ ಸತ್ತವರಂತೆ ಆಗುವರು. ಅದನ್ನು ನಾನು ಚೆನ್ನಾಗಿ ಬಲ್ಲೆನು. ಅದರಿಂದಲೇ ಮೊದಲೇ ಈ ವಿಷಯವನ್ನು ನಿಮಗೆ ತಿಳಿಸಿದೆನು.

**ರುಕ್ಮಿ**—ಭಲಾ! ಮಹರ್ಷಿಗಳೇ....ಭಲಾ! ಬಹಳ ಚೆನ್ನಾಗಿ ಹೇಳಿದಿರಿ! ಇದು ಸಿಂಹಕಾಮಿನಿಯನ್ನು ನರಿಯು ಬಯಸಿದಂತಾಯಿತು!

**ನಾರದ**—ನಿಜ! ನಿಜ! ಇದು ಸಿಂಹಕಾಮಿನಿಯನ್ನು ನರಿಯು ಬಯಸಿದಂತೆಯೇ ಸರಿ!

**ಶಿಶುಪಾಲ**—ಇನ್ನು ಕೃಷ್ಣನಿಲ್ಲಿಗೆ ಬಂದರೆ ತಕ್ಕ ಮರ್ಯಾದೆಯೇ ಆಗುವುದು.

**ರುಕ್ಮ**—ಅದನ್ನು ಕೇಳಬೇಕೇ! ಶಿಶುಪಾಲನ ಮದುವೆಯಲ್ಲಿ ಪಶುಪಾಲನಿಗೆ ಪಶುವು ಸಭೆಗೆ ನುಗ್ಗಿದರೆ ಆಗುವ ಮರ್ಯಾದೆಯೇ ಆಗುವುದು.

**ಜರಾಸಂಧ**—ಇನ್ನು ವಿಳಂಬವೇಕೆ? ಮುಂದಿನ ಕಾರ್ಯಗಳನ್ನು ಗಮನಿಸುವ. ೩೮ (ಹೋಗುವರು.)

## ದೃಶ್ಯ ೬—ಕುಂಡಿನನಗರದ ಉಪವನದ ಅಂಬಿಕಾ ದೇವಾಲಯ.

(ರುಕ್ಮಿಣಿಯು, ಸರಸವಾಣಿ ಮುಕ್ತಾವಳಿ ಮೊದಲಾದ ಸಖಿಯರೊಡನೆ ಇರುವಳು.)

**ರುಕ್ಮಿಣಿ**—ಸಖಿಯರೇ, ನನ್ನ ಭಾಗ್ಯವನ್ನೆಷ್ಟೆಂದು ಕೊಂಡಾಡಲಿ! ೩೯ ನಿಮ್ಮ ಮಾತನ್ನು ಕೇಳಿ ಲಜ್ಜೆಯುಳಿದು ಆ ಯದುಕುಲತಿಲಕನಿಗೆ ಪತ್ರವನ್ನು ಬರೆದು ಕಳುಹಿಸಿದೆನಷ್ಟೆ! ಆ ಪುರುಷೋತ್ತಮನು ದೀನಳಾದ ನನ್ನ ಪ್ರಾರ್ಥನೆಯನ್ನು ನಿರಾಕರಿಸುವನೋ ಏನೋ ಎಂಬ ಸಂದೇಹವು ನನ್ನನ್ನು ಬಹಳವಾಗಿ ಬಾಧಿಸುತ್ತಿತ್ತು. ಅಂಬಿಕೆಯ ಕೃಪೆಯಿಂದ ಆತನು ನನ್ನನ್ನನುಗ್ರಹಿಸಿ ಪೂಜ್ಯನಾದ ಅಗ್ನಿದ್ಯೋತನೊಡನೆ ಈ ಪತ್ರವನ್ನು ಕಳುಹಿಸಿರುವನು. ಆ ಪುಣ್ಯಮೂರ್ತಿಯ ಕರುಣಾರಸವು ನನ್ನ ಮೇಲೆ ಹೀಗೆ ವರ್ಷಿಸುವುದೆಂದು ನಾನು ನಂಬಿರಲಿಲ್ಲ.

**ಸರಸವಾಣಿ**—ಪ್ರಿಯಸಖೀ, ರಸಿಕಾಗ್ರಣಿಯೂ, ಲೋಕಾತಿಶಯ ಲಾವಣ್ಯವತಿಯೂ ಆಗಿರುವ ನಿನ್ನ ಪ್ರಾರ್ಥನೆಯನ್ನು ಮಹಾ ರಸಿಕಶಿಖಾಮಣಿಯೂ, ಸುಂದರೀವಿಲಾಸ ಪ್ರಿಯನೂ ಆಗಿರುವ ಆ ಗಾನಲೋಲನು ನಿರಾಕರಿಸಲಾರನೆಂದು ನಾನು ಮೊದಲೇ ಹೇಳಿರಲಿಲ್ಲವೇ? ನವರಸ ಪರಿಪಾಕದಿಂದ ಕಿಕ್ಕಿರಿದು ಬಿರಿದು, ರಾಗರಂಜಿತವಾದ ದಾಡಿಮೀ ಫಲವು ಸಿಕ್ಕಿರುವಾಗ ಶುಕವು ಸವಿಯಲೊಲ್ಲೆನೆನ್ನುವುದೇ? ಎಲ್ಲಿ? ಶ್ರೀಕೃಷ್ಣನು ಪ್ರತ್ಯುತ್ತರವನ್ನೇನೆಂದು ಬರೆದಿರುವನು?

**ರುಕ್ಮಿಣಿ**—(ಪತ್ರವನ್ನೋದುವಳು.)

**ಕಂ**|| ಭುವನೈಕಮೋಹಿನಿಯೆ ನಾ |
ನವಲೋಕಿಸಿ ನಿನ್ನ ಪತ್ರಮಂ ಸುಖಿಯಾದೆಂ ||
ನವಮನ್ಮಥಾಗ್ನಿಸಾಕ್ಷಿಕ |
ಸುವಿವಾಹವ ಮನದೆ ನಿನ್ನೊಳಾಂ ಕೈಕೊಂಡೆಂ || ೫೦ ||

ಪರರಾಜ ತೇಜಮಳಿಯುತೆ |
ಕರಮಂ ವಿಸ್ತರಿಸಿ ಪದ್ಮಿನಿಗೆ ಸಮ್ಮದಮಂ ||
ವಿರಚಿಪ ತೇಜೋನಿಧಿಯೊಂ |
ದಿರವಂ ನೀಂ ಕ್ಷಿಪ್ರದೆನ್ನೊಳೀಕ್ಷಿಪೆ ರಮಣೀ || ೫೧ ||

ಎಂದು ಬರೆದಿರುವನು.

**ಸರಸವಾಣಿ**—ಬಹಳ ಸಂತೋಷ. ನೀನು ಮೊದಲಿಂದಲೂ ಪರಮಭಕ್ತಿಯಿಂದ ಆರಾಧಿಸುತ್ತಿದ್ದ ಕಾರಣ ಅಂಬಿಕೆಯು ನಿನ್ನ ಇಷ್ಟಾರ್ಥವನ್ನು ಕರುಣಿಸಿರುವಳು.

**ರುಕ್ಮಿಣಿ**—ನಿಜ! ಓಂ ಇನ್ನು ಆ ನನ್ನ ಮನೋಹರನು ಯಾವಾಗ ಬರುವನೋ ಕಾಣೆನೇ!

**ಸರಸವಾಣಿ**—ಕ್ಷಿಪ್ರದಲ್ಲಿಯೇ ಬರಬಹುದು. ಇನ್ನು ದೇವಿಯನ್ನಾರಾಧಿಸಿ ಶ್ರೀಕೃಷ್ಣನ ಆಗಮನವನ್ನು ನಿರೀಕ್ಷಿಸುತ್ತಿರೋಣ.

**ರುಕ್ಮಿಣಿ**—ಹಾಗೆಯೇ ಆಗಲಿ. (ಅಂಬಿಕೆಯನ್ನು ಎಲ್ಲರೂ ಪೂಜಿಸುವರು.)

**|| ಸೀಸಪದ್ಯ ||**

**ಚಂದ್ರಕಿರಣಾಭರಣೆ ಚಂಡದಾನವ ಹರಣೆ ಸಾಂದ್ರಕರುಣಾಸದನೆ ಇಂದ್ರಶರಣೆ |**
**ಹಿಮಶಿಲೋಚ್ಚಯತನಯೆ ರಮಣೀಯಗುಣನಿಲಯೆ ಕಮನೀಯ ಕಾಂತಿಮಯೆ ಕಲಿತವಿಜಯೆ**
**ಲಲಿತಗುಣ ಮಾಲಿನೀ ಲಾವಣ್ಯವಾಹಿನೀ ಶಿವಹೃದಯ ಮೋಹಿನೀ ಶಿಷ್ಟಜನನೀ |**
**ವಿವಿಧ ವಿಭವಾಂಚಿತೇ ದಿವಿಜ ಗಣ ಪೂಜಿತೇ ಮಾಂಗಲ್ಯಭಾಸಿತೇ ಮಾನ್ಯಚರಿತೇ ||೫೨||**

ಗೀತ|| ಸರ್ವಮಂಗಳೆ ನಿನ್ನ ಪದಸಾರಸದೆ ನಾಂ|
ಮಣಿದು ಬೇಳ್ಪೆನು ದಿವಿಜನುತ ಭವ್ಯಲೀಲೆ ||
ಕರುಣದಿಂದೆನಗೆ ಚಿರಮಾಂಗಲ್ಯಸುಖವ |
ನೀಡು ನೀಂ ಸೌಭಾಗ್ಯ ಜಯ ಭರಿತೆ ಲಲಿತೇ || ೫೩ ||

(ಮುಂದೆ ನೋಡಿ) ಸಖೀ ಸರಸವಾಣೀ! ಸರಸವಾಣೀ! ಅಲ್ಲಿ ನೋಡೇ, ಅದು ಯಾರೇ? ದಿವ್ಯಕಾಂತಿಯಿಂದ ದಿಗಂತಗಳನ್ನು ಬೆಳಗುತ್ತ ರಥದಲ್ಲಿ ಈಕಡೆಯೇ ಬರುತ್ತಿರುವರು? (ಸಖಿಯರು ಆಶ್ಚರ್ಯದಿಂದ ನೋಡುವರು.)

**ಸರಸವಾಣಿ**—(ಮುಂದೆ ಹೋಗಿ ನೋಡಿಬಂದು ಸಂತೋಷದಿಂದ) ಸಖೀ! ಸಖೀ! ಶ್ರೀಕೃಷ್ಣಮೂರ್ತಿಯಂತೆ ಕಾಣುವುದು!

**ರುಕ್ಮಿಣಿ**—(ಆಶ್ಚರ್ಯ ಸಂತೋಷಗಳಿಂದ) ಏನು ಏನು? ಶ್ರೀಕೃಷ್ಣ ಪರಮಾತ್ಮನೇ? ನನ್ನ ಮನೋವಲ್ಲಭನೇ? ನಿಜವಾಗಿಯೂ ನನ್ನ ಪ್ರಿಯನೇ? (ಶ್ರೀಕೃಷ್ಣನು ಬಳಿಗೆ ಬರುತ್ತಿರುವುದನ್ನು ನೋಡಿ) ಅಹುದು! ಅಹುದು! ನನ್ನ ಪ್ರಾಣೇಶನು. ನನ್ನ ಮನೋಹರನಾದ ಗೋಕುಲಾನಂದ ಮೂರ್ತಿಯು!! (ಪ್ರವೇಶಿಸಿದ ಕೃಷ್ಣನಿಗೆ ನಮಸ್ಕರಿಸಿ)

ಕಂ|| ಜಯಜಯ ನಳಿನದಳಾಕ್ಷಾ |
ಜಯ ಲಕ್ಷ್ಮೀಕಲಿತ ವಕ್ಷ ರಿಪುಕುಲಶಿಕ್ಷಾ ||
೪೧ ಜಯ ಕರುಣಾರ್ದ್ರ ಕಟಾಕ್ಷಾ |
ಜಯ ಕೃಷ್ಣಾ ದೀನ ರುಕ್ಮಿಣೀಸಂರಕ್ಷಾ || || ೫೪ ||

(ಪುಷ್ಪಮಾಲೆಯನ್ನು ಹಾಕುವಳು.)

**ಕೃಷ್ಣ**—ಪರಮ ಗುಣಶೀಲೆಯಾದ ರುಕ್ಮಿಣೀ! ನಿನ್ನ ನಿಶ್ಚಲ ಭಕ್ತಿ ಪ್ರೀತಿಗಳಿಂದ ನನಗತ್ಯಾನಂದವಾಯಿತು. ಇದು ವಿಳಂಬಕ್ಕೆ ಸಮಯವಲ್ಲ. ಬಾ, ರಥವನ್ನು ಹತ್ತು; ನಮ್ಮ ದ್ವಾರಾವತಿಗೆ ವಾಯುವೇಗದಿಂದ ಹೊರಟುಹೋಗೋಣ.

**ರುಕ್ಮಿಣಿ**—ಪ್ರಾಣನಾಥಾ! ನಿನ್ನನುಗ್ರಹದಿಂದ ಇಂದಿಗೆ ನಾನು ಧನ್ಯಳಾದೆನು. ನಿನ್ನಿಷ್ಟದಂತೆ ಆಗಲಿ. (ಕೃಷ್ಣನು ರುಕ್ಮಿಣಿಯೊಡನೆ ಹೋಗುವನು.)

## ದೃಶ್ಯ ೭.—ಅರಮನೆಯ ಮುಂದುಗಡೆ.

**ನಾರದ**—ಆಯಿತು. ಶ್ರೀಕೃಷ್ಣಪರಮಾತ್ಮನ ಪ್ರಯತ್ನವೂ ರುಕ್ಮಿಣಿಯ ಅಭೀಷ್ಟವೂ ಸಫಲವಾಗಿ ನನಗಾನಂದವಾಯಿತು. ಕೃಷ್ಣನಿಗೆ ಮೋಸ ಮಾಡಿ ರುಕ್ಮಿಣಿಯನ್ನು ವಿವಾಹ ಮಾಡಿಕೊಳ್ಳಬೇಕೆಂದು ಶಿಶುಪಾಲನು ಬಾಯಿ ತೆರೆದುಕೊಂಡು ಅತಿ ಕುತೂಹಲಾನಂದಗಳಿಂದ ಕಾದಿರುವನು. ತಮ್ಮ ಕಾರ್ಯವು ಕೈಗೂಡಿತೆಂದು ಹಿಗ್ಗುತ್ತಿರುವ ಆ ರುಕ್ಮಿ ಜರಾಸಂಧರ ಆನಂದಕ್ಕೆ ಪಾರವೇ ಇಲ್ಲ. ಶಿಶುಪಾಲನು ಹಿಂದೆ ಹೇಳಿದ್ದಂತೆ ಪಶುಪಾಲನ ಕಣ್ಣಿಗೆ ಮಣ್ಣು ಬೀಳಲಿಲ್ಲ; ಶಿಶುಪಾಲನ ಬಾಯಿಗೇ ಮಣ್ಣು ಬಿದ್ದು ಪಶುಪಾಲನ ಕೈಗೆ ಹೆಣ್ಣು ಬಿತ್ತು. ಯಾವಾಗಲೂ ಧರ್ಮಪಕ್ಷಕ್ಕೇ ಜಯವಾಗುವುದಲ್ಲದೆ, ದುರಾಶಾಪರರಾದ ಅಧರ್ಮಶೀಲರಿಗೆ ಎಂದಿಗಾದರೂ ಉತ್ತಮ ಫಲವು ಲಭಿಸೀತೇ? ಆಗಲಿ; ನಾನೀಗಲೇ ಅರಮನೆಗೆ ಹೋಗಿ, ವಿವಾಹ ಸಂಭ್ರಮದಲ್ಲಿ ಆನಂದಮಗ್ನರಾಗಿರುವ ಶಿಶುಪಾಲಾದಿಗಳನ್ನು ಕಂಡು, ಮುಂದೆ ನಡೆಯುವ ವಿಚಿತ್ರಗಳನ್ನು ನೋಡಿ ಆನಂದಪಡುವೆನು. (ಹೋಗುವನು.)

## ದೃಶ್ಯ ೮.—ವಿವಾಹಮಂಟಪ.

(ಶಿಶುಪಾಲನು ಮದವಣಿಗನಾಗಿ ಕುಳಿತಿರುವನು. ಜರಾಸಂಧ ರುಕ್ಮಿ ಭೀಷ್ಮಕರಾಜನೇ ಮೊದಲಾದವರೂ ನಾರದರೂ ಬ್ರಾಹ್ಮಣರೂ ಸುವಾಸಿನಿಯರೂ ವಿವಾಹಸಂಭ್ರಮದಲ್ಲಿರುವರು.)

**ರುಕ್ಮಿ**—ಜರಾಸಂಧಭೂಪಾಲಾ, ನಿನ್ನ ಕೃಪೆಯಿಂದ, ರಾಜಕುಲರತ್ನನೆನಿಸಿದ ಈ ನಮ್ಮ ಶಿಶುಪಾಲಭೂಪಾಲನು ನನಗೆ ಭಾವನಾಗಿ ದೊರೆತನು. ಆ ಪಶುಪಾಲನು ನಮಗೆ ಮಾಡಿದ ಅವಮಾನಕ್ಕೂ ಮೋಸಕ್ಕೂ ತಕ್ಕಂತೆ ಈಗ ನಾವು ವಿವಾಹವನ್ನೇರ್ಪಡಿಸಿದುದರಿಂದ ಆ ದ್ರೋಹಿಗೆ ಸರಿಯಾದ ಆಶಾಭಂಗವಾದಂತಾಯಿತು. ಇನ್ನು ರುಕ್ಮಿಣೀ ಶಿಶುಪಾಲರ ವಿವಾಹವು ಯಾವವಿಘ್ನ ಬಂದರೂ ನಿಲ್ಲುವಂತಿಲ್ಲ. ಇದನ್ನು ಕೇಳಿ ಆ

ನೀಚನ ಹೊಟ್ಟೆಯುರಿಯಲಿ, ಅವನ ಕಣ್ಣುಗಳಲ್ಲಿ ರಕ್ತವು ಬರಲಿ-ನಮ್ಮ ಶಿಶುಪಾಲಭೂಪಾಲನ ಆನಂದವು ಉಕ್ಕೇರಲಿ.

**ನಾರದ**—ಹಾಗೆತಾನೇ ಆಗಬೇಕು. ಒಬ್ಬರ ಕೈಗೆ ಹೆಣ್ಣು, ಇನ್ನೊಬ್ಬರ ಕಣ್ಣಿಗೆ ಮಣ್ಣು. ಒಬ್ಬರಿಗೆ ವಿಜಯ, ಮತ್ತೊಬ್ಬರಿಗೆ ಪರಾಜಯ. ಒಬ್ಬರಿಗೆ ವಿವಾಹ, ಇನ್ನೊಬ್ಬರಿಗೆ ವಿವಾದ. ಒಬ್ಬರಿಗೆ ತೋಷ, ಮತ್ತೊಬ್ಬರಿಗೆ ರೋಷ. ಒಬ್ಬರಿಗೆ ವಿಲಾಸ, ಮತ್ತೊಬ್ಬರಿಗೆ ವಿಲಾಪ—ಹೀಗೆಯೇ ಪ್ರಪಂಚವಿಚಾರಗಳೇ ವಿಚಿತ್ರ! ಆದರೆ ಅವರವರ ಗುಣ ಪರಾಕ್ರಮಗಳಿಗೆ ತಕ್ಕಂತೆ ಅವರಿಗೆ ಫಲವು ಲಭಿಸುವುದು.

**ಶಿಶುಪಾಲ**—ನಿಜ! ನಿಜ! ನ್ಯಾಯವಾದ ಮಾತನ್ನೇ ಹೇಳಿದಿರಿ; ಆಹಾಹಾ! ಆ ಗೊಲ್ಲನ ಅಟ್ಟಹಾಸವೇನು! ಅವನ ಪ್ರತಿಷ್ಠೆಯೇನು! ಹೇಳಲಾಗದು. ಆದಿನ ಸ್ವಯಂವರಮಂಟಪದಲ್ಲಿಯೇ ಅವನಿಗೆ ತಕ್ಕ ಅವಮಾನವಾಯಿತು. ಆದರೂ ಇನ್ನೂ ಅವನು ಚಪಲನಾಗಿ ಮತ್ತೆ ಸ್ವಯಂವರವು ನಡೆಯುವುದೆಂಬ ಆಸೆಯಿಂದ ಬಾಯ್ದೆರೆದುಕೊಂಡಿರಬಹುದು. ಈ ನನ್ನ ವಿವಾಹ ವರ್ತಮಾನವು ಅವನ ಕಿವಿಗೆ ಮುಟ್ಟಿ, ಅವನ ಹೊಟ್ಟೆಯುರಿದರೆ, ನಾವು ಅವನಿಗೆ ಸರಿಯಾದ ಶಿಕ್ಷೆ ಮಾಡಿದಂತೆಯೇ ಸರಿ! ಅವನು ಇಲ್ಲಿಗೆ ಬಂದಿದ್ದರೆ ಚೆನ್ನಾಗಿರುತ್ತಿತ್ತು!

**ಜರಾಸಂಧ**—ನಿಜ! ಬಾರದಿದ್ದರೆ ಹೋಗಲಿ; ಲಗ್ನವು ಸಮೀಪಿಸುತ್ತ ಬಂತು. ರುಕ್ಮಿಕುಮಾರಾ, ಇನ್ನು ಕನ್ಯೆಯನ್ನು ವಿವಾಹ ವೇದಿಕೆಗೆ ಕರತರಬಹುದಲ್ಲವೇ!

**ರುಕ್ಮಿ**—ಓಹೋ! ಆಗಬಹುದು. (ಹೋಗುತ್ತಿರುವನು.)

**ಅಂತಃಪುರದ ಚೇಟಿಯರು**—(ಓಡಿಬಂದು) ಅಯ್ಯೋ! ರುಕ್ಮಿಣೀದೇವಿಯು ಅಂತಃಪುರದಲ್ಲಿಲ್ಲವಲ್ಲಾ!

**ಭೀಷ್ಮಕ**—ಎಲ್ಲಿ ಹೋದಳು? ಅರಮನೆಯಲ್ಲಿ ಮತ್ತೆಲ್ಲಿಯೋ ಇರಬೇಕು.

**ಸೇವಕರು**—(ಓಡಿಬಂದು) ಪ್ರಭುಗಳಿಗೆ ಜಯವಾಗಲಿ: ಯಾರೋ ಕೃಷ್ಣದೇವರಂತೆ, ರುಕ್ಮಿಣೀದೇವಿಯವರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ವೇಗವಾಗಿ ಹೋಗುತ್ತಿರುವರು. ನಾವು ತಡೆದರೂ ನಮ್ಮೆಲ್ಲರನ್ನೂ

ಹೊಡೆದು ಬಡಿದು, ಮುಂದಕ್ಕೆ ಕುದುರೆಗಳನ್ನು ಹಾರಿಸಿಕೊಂಡು ಹೊರಟುಹೋದರು.

**ಶಿಶುಪಾಲ, ಜರಾಸಂಧ, ರುಕ್ಮಿ, ಭೀಷ್ಮಕ**—ಏನು? ಕೃಷ್ಣನೇ? ರುಕ್ಮಿಣಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋದನೇ?

**ಸೇವಕ**—ಅಹುದು ಮಹಾಪ್ರಭೂ!

**ಶಿಶುಪಾಲ**—(ಮಹಾ ರೋಷ ರಭಸಗಳಿಂದೆದ್ದು)

**ಕಂ||** ಫಡಫಡ! ನಾನೀಕ್ಷಣದೊಳ್ |
ಮಡದಿಯ ಪಿಡಿದೊಯ್ದ ಜಡನ ಪಿಡಿಯುತೆ ಶಿರಮಂ ||
ಕಡಿದಿಡುತೆ ಬಿಡದೆ ನಿಮಿಷದೊ |
ಳುಡುರಾಜಾನನೆಯ ತಂದು ಪರಿಣಯಮಪ್ಪೆಂ || ೫೫ ||

(ಎದ್ದು ಧನುಸ್ಸನ್ನು ಸೆಳೆದುಕೊಂಡು ಹೊರಡುವಷ್ಟರಲ್ಲಿ)

**ಜರಾಸಂಧ**—(ತಡೆದು) ಶಿಶುಪಾಲಾ! ನಿಲ್ಲು ನಿಲ್ಲು! ನೀನು ವಿವಾಹದೀಕ್ಷಾಬದ್ಧನಾಗಿರುವೆ. ನಾವುಗಳು ಹೋಗಿ ಆ ನೀಚ ಕೃಷ್ಣನನ್ನು ಬಲಿಯಿಕ್ಕಿ ರುಕ್ಮಿಣಿಯನ್ನು ಕರೆತರುವೆವು.

**ರುಕ್ಮಿ**—ಭಾವಾ! ಶಿಶುಪಾಲಾ! ನೀನು ಸ್ವಲ್ಪವೂ ಚಿಂತಿಸಬೇಡ. ಜರಾಸಂಧಭೂಪಾಲಾ! ನೀವೆಲ್ಲರೂ ಇಲ್ಲಿಯೇ ಇರಿ, ನಾನೊಬ್ಬನೇ ಹೋಗಿ, ರುಕ್ಮಿಣಿಯೊಡನೆ ಆ ನೀಚನನ್ನು ಹಿಡಿದು ತರುವೆನು. ನರಿಯನ್ನು ಹಿಡಿಯಲು ಇಷ್ಟು ಸಿಂಹಗಳು ಹೋಗಬೇಕೇ?

**ನಾರದ**—ನಿಜ ನಿಜ! (ಆತ್ಮ) ನಾಯಿಯೊಂದು ಹೋದರೆ ಸಾಕು. (ಪ್ರಕಾಶಂ) ರುಕ್ಮಿಕುಮಾರಾ, ಮೊದಲು ಹೊರಡು, ವಿಳಂಬಮಾಡಬೇಡ.

**ರುಕ್ಮಿ**—ಇದೋ ಹೊರಟೆ. (ಹೋಗುವನು.)

**ಜರಾಸಂಧ**—ಕೃಷ್ಣನು ಸಾಮಾನ್ಯನಲ್ಲ. ಒಂದು ವೇಳೆ ಈ ರುಕ್ಮಿಗೆ ಅವನನ್ನು ಹಿಡಿಯಲು ಸಾಧ್ಯವಾದೀತೋ ಇಲ್ಲವೋ! ಹೇಗಾದರೂ ಆಗಲಿ, ನಾವುಗಳು, ಬೇರೆ ಮಾರ್ಗವಾಗಿ ಹೋಗಿ ಆ ನೀಚನನ್ನು ಅಡ್ಡಗಟ್ಟಿ ಹಿಡಿದು ತರುವೆವು. (ಹೋಗುವರು.)

## ದೃಶ್ಯ ೯—ಕುಂಡಿನನಗರಕ್ಕೆ ದ್ವಾರಕೆಯಿಂದ ಬರುವ ಮಾರ್ಗ.

**ಬಲರಾಮ**—(ಪ್ರವೇಶಿಸಿ) ರುಕ್ಮಿಣಿಯನ್ನು ಸಾಧಿಸಿ ತರಲು ಬಂದ ಕೃಷ್ಣನ ಪ್ರಯತ್ನವೇನಾಯಿತೋ ತಿಳಿಯಲಿಲ್ಲ. ಅಲ್ಲಿ ಅವನಿಗೆ ಪ್ರತಿಪಕ್ಷದವರಾದ ಶಿಶುಪಾಲಾದಿಗಳೊಡನೆ ಯುದ್ಧವು ಸಂಧಿಸಿಯೇ ಇರಬೇಕು. ಹೇಗಾದರೂ ಆಗಲಿ; ಮುಂದೆ ಹೋಗಿ ನಿಜಾಂಶವನ್ನು ತಿಳಿದು, ಅವಶ್ಯವಾದರೆ ಆ ದುಷ್ಟ ಶಿಶುಪಾಲಾದಿಗಳೊಡನೆ ಕಾದಿ, ಅವರನ್ನು ಓಡಿಸಿ, ಕೃಷ್ಣನ ಕಾರ್ಯವು ನಿರಾತಂಕವಾಗಿ ಕೈಗೂಡುವಂತೆ ಮಾಡುವೆನು.

(ಹೋಗುವನು.)

## ದೃಶ್ಯ ೧೦—ಕುಂಡಿನನಗರದ ಹೊರಗಣ ಭಾಗ.

(ಶ್ರೀಕೃಷ್ಣನು ರುಕ್ಮಿಣಿಯೊಡನೆ ರಥದಲ್ಲಿ ಹೋಗುತ್ತಿರುವನು.)

**ಶ್ರೀಕೃಷ್ಣ**—ಪ್ರಿಯೇ ರುಕ್ಮಿಣೀ, ನಿಮ್ಮಣ್ಣನು ನನ್ನ ವಿರೋಧಿಗಳ ಪಕ್ಷದವನಾದರೂ ನೀನು ಮಾತ್ರ ನನ್ನನ್ನು ವರಿಸಿದುದು ಪರಮಾಶ್ಚರ್ಯವು!

**ರುಕ್ಮಿಣಿ**—ಪ್ರಿಯಾ! ದುಷ್ಟರಿಗೆ ದುಷ್ಟರ ಸ್ನೇಹವು ರುಚಿಸುವುದಲ್ಲದೆ ನಿನ್ನಂತಹ ಧರ್ಮಸ್ವರೂಪನ ಪ್ರೇಮಕ್ಕೂ ಸ್ನೇಹಕ್ಕೂ ಅವರು ಪಾತ್ರರಾದಾರೇ! ನಮ್ಮ ಅಣ್ಣನ ವರ್ತನವು ಮೊದಲಿಂದಲೂ ಸರಿಯಾದುದಲ್ಲವೆಂಬುದನ್ನು ನಾನು ಬಲ್ಲೆನು. ಅವನ ವರ್ತನವು ನಮ್ಮ ತಾಯಿ ತಂದೆಗಳಿಗೂ ಸಮ್ಮತವಾಗಿಲ್ಲ.

**ರುಕ್ಮಿ**—(ಧನುರ್ಧಾರಿಯಾಗಿ ಪ್ರವೇಶಿಸಿ) **ಛಿ ಛಿ**

**ಕಂ**|| ಎಲವೆಲವೊ ವಧೂಚೋರನೆ |
ತಳರ್ದಪೆ ನೀನೆಲ್ಲಿಗಲ್ಲೆ ನಿಲ್‌ನಿಲ್ ದುರುಳಾ ||
ತಲೆಯನುರುಳ್ಚುತೆ ನಿನ್ನಂ |
ಬಲಿಗುಡಲಿದೆ ಬಂದೆ ನಿಂದು ರುಕ್ಮಿ ಕುಮಾರಂ || ೫೬ ||

ಎಲವೆಲವೋ ನಾರೀಚೋರಾ! ಹೇಡೀ, ಗೊಲ್ಲಾ! ಕನ್ಯಾರತ್ನವನ್ನು ಕದ್ದೊಯ್ದುವೆಯಾ! ಈಗಲೇ ನನಗೆ ವಿಧೇಯನಾಗಿ ಬಂದು

ನನ್ನ ತಂಗಿಯನ್ನು ಬಿಟ್ಟುಕೊಟ್ಟು ಶರಣಾಗತನಾಗುವೆಯೋ? ನನ್ನ ಶರಕ್ಕಾಹುತಿಯಾಗುವೆಯೋ? ಏನು ಹೇಳುವೆ?

**ಕೃಷ್ಣ**—(ರುಕ್ಮಿಣಿಯನ್ನು ನೋಡಿ) ಓಹೋ! ಇದೋ ಪ್ರಿಯೇ, ನಿಮ್ಮ ಅಣ್ಣನು ಬಂದೇ ಬಿಟ್ಟನು! ಇವನನ್ನು ವಿಚಾರಿಸಿಕೊಳ್ಳುವೆನು. (ರುಕ್ಮಿಯನ್ನು ನೋಡಿ)

**ಕಂ||** ತಿಳಿಯದೆ ಯುಕ್ತಾ ಯುಕ್ತವ |
ಗಳಪುವ ಖಳರುಕ್ಮಿ, ನಿನ್ನ ದುರ್ಮದವಂ ನಾ ||
ನಿಳಿಸಿದಪೆಂ ನಿನಗೀಗಳೆ |
ತಿಳಿಸಿದಪೆಂ ನನ್ನ ಶರಕಲಾ ಕೌಶಲಮಂ || ೫೭ ||

**ರುಕ್ಮಿಣಿ**—(ಕಾತರಳಾಗಿ ಕೃಷ್ಣನ ಕೈಯನ್ನು ಹಿಡಿದು) ಪ್ರಾಣನಾಥಾ! ಅಪರಾಧಿಯಾದ ನಮ್ಮ ಅಣ್ಣನ ಪ್ರಾಣವನ್ನುಳಿಸಿ ಕಾಪಾಡು.

**ಕೃಷ್ಣ**—ಪ್ರಿಯೇ, ನೀನು ಭಯಪಡಬೇಡ, ನಿಮ್ಮಣ್ಣನ ಪ್ರಾಣಕ್ಕೆ ಭಯವಿಲ್ಲ. ಅವನ ದುರ್ಮಾರ್ಗಕ್ಕೆ ತಕ್ಕಂತೆ ಅವನನ್ನು ಶಿಕ್ಷಿಸಿ, ಅವಮಾನ ಮಾಡಿ ಕಳುಹಿಸುವೆನು.

**ರುಕ್ಮಿ**—ಎಲವೋ! ಅಧಮ ಪಶುಪಾಲಾ! ನಿಲ್ಲು; ಯುದ್ಧಕ್ಕೆ ನಿಲ್ಲು.

**ಕೃಷ್ಣ**—ರುಕ್ಮೀ, ನೀಚನಾದ ಆ ಶಿಶುಪಾಲನಿಂದ ಪಾಲಿತನಾದ ನೀನೊಂದು ಪಶುವು; ಆ ಪಶುವನ್ನು ನಾನು ಪಾಲಿಸದಿದ್ದರೆ ನೀನು ಈ ರಣಯಜ್ಞಕ್ಕೆ ಪಶುವಾಗಿ ಕಡಿಯಲ್ಪಡುವೆ. ಬಲ್ಲೆಯೋ?

**ರುಕ್ಮಿ**—ದುರಾತ್ಮಾ! ನನ್ನನ್ನು ಅವಹೇಳನ ಮಾಡುವೆಯಾ? ಈ ರಣಯಜ್ಞಕ್ಕೆ ಪಶುವು ಯಾರೆಂಬುದನ್ನು ತೋರಿಸುವೆನು, ಬಾ.

**ಕಂ||** ಶರವಂ ಬಿಡುವೆಂ ನಿನ್ನಯ |
ಶಿರವಂ ಕಡಿವೆಂ ಮದೀಯ ಸಹಜೆಯ ನೀಗಳ್ ||
ಕರೆವೆಂ ಪರಮಾನಂದದೆ |
ಮೆರೆವೆಂ ರುಕ್ಮಿಣಿಯ ನಿತ್ತು ಶಿಶುಪಾಲನೊಳಾಂ || ೫೮ ||

ಕೃಷ್ಣ— ಕಂ|| ಆಹವದೀಗಳೆ ನಿನ್ನ ಸ |
ಮೂಹವ ಸದೆಬಡಿದು ನಿನ್ನ ಮದವಮಡಗಿಸುತುಂ ||
ಮೋಹನೆಯಂ ಕೊಂಡೊಯ್ವೆಂ |
ಸಾಹಸಮಂ ನೋಡು ಮಾಡು ಶರಣಾಗತಿಯಂ ||೫೯||

(ಇಬ್ಬರಿಗೂ ಯುದ್ಧವಾಗುವುದು.)

## ದೃಶ್ಯ—ವಿವಾಹಮಂಟಪ.

(ಭೀಷ್ಮಕರಾಜನೂ, ಅವಮಾನಿತನಾದ ರುಕ್ಮಿಯೂ ಬಂಧು ವಿಪ್ರ ಸುವಾಸಿನಿಯರೊಡನೆ ಇರುವರು. ಕೃಷ್ಣ ಬಲರಾಮರು ಮಾತನಾಡುತ್ತ ಪ್ರವೇಶಿಸುವರು.)

ಬಲರಾಮ—ಕೃಷ್ಣಾ! ವಿವಾಹಾತುರನಾಗಿ ಬಂದ ನಿನಗೆ ವಿವಾದವೂ ಶತ್ರು ವಿರೋಧವೂ ಒದಗಲೇ ಒದಗುವುದೆಂದು ತರ್ಕಿಸಿ, ನಾನು ಸೈನ್ಯ ಸಹಿತನಾಗಿ ಹೊರಟು, ನಿನ್ನನ್ನು ನೋಡುವಾತುರದಿಂದ ಬರುತ್ತಿದ್ದೆನು. ಮಾರ್ಗದಲ್ಲಿ ಜರಾಸಂಧಾದಿಗಳ ಸೈನ್ಯವು ಸಂಧಿಸಿದುದರಿಂದ ಅವರೊಡನೆ ಯುದ್ಧಮಾಡಿ, ಅವರೆಲ್ಲರನ್ನೂ ಈ ನಗರದ ಎಲ್ಲೆಯಿಂದಾಚೆಗೆ ಓಡಿಸಿ ಬಂದೆನು. ಪ್ರಾಪ್ತಮನೋರಥನಾದ ನಿನ್ನನ್ನು ನೋಡಿ ಬಹಳ ಸಂತೋಷವಾಯಿತು.

ಕೃಷ್ಣ—ಅಣ್ಣಾ! ನಿನ್ನಾಶೀರ್ವಾದ ಬಲದಿಂದ ಪ್ರಾಪ್ತಮನೋರಥನಾದೆನು. ನೀನು ಸಕಾಲಕ್ಕೆ ಬಂದುದರಿಂದ ಆ ದುಷ್ಟ ಜರಾಸಂಧಾದಿಗಳೊಡನೆ ಕಾದುವ ಕಾರ್ಯವು ನನಗೆ ತಪ್ಪಿತು. ನಮ್ಮ ರುಕ್ಮಿಯು ನನ್ನೊಡನೆ ಪ್ರತಿಭಟಿಸಿ ಯುದ್ಧಮಾಡಿ, ಅವಮಾನಿತನಾಗಿ ಪುರಕ್ಕೆ ಬಂದನು. ನಾನು ಭೀಷ್ಮಕರಾಜನ ಪ್ರಾರ್ಥನೆಯಂತೆ ಇಲ್ಲಿಗೆ ವಿವಾಹಕ್ಕಾಗಿ ಬಂದುದನ್ನು ನೋಡಿ, ಮದವಣಿಗನಾಗಿದ್ದ ಶಿಶುಪಾಲನು, ರೋಷಾವೇಶದಿಂದ ಕೆರಳಿ, ರುಕ್ಮಿಯೂ ಭೀಷ್ಮಕರಾಜನೂ ತನಗವಮಾನ ಮಾಡಿದರೆಂದು ಅವರಿಗೆ ತಕ್ಕ ಶಿಕ್ಷೆ ಮಾಡುವುದಾಗಿ ಶಪಥಮಾಡಿಕೊಂಡು ತನ್ನ ರಾಜಧಾನಿಗೆ ಹೊರಟುಹೋದನಂತೆ. ಈ ಸಮಯದಲ್ಲಿ ನಿನ್ನ ಮುಂದಾಲೋಚನೆಯೂ, ಅದ್ಭುತಶಕ್ತಿ ಚಾತುರ್ಯಗಳೂ, ನಮಗೆ ಈ ಆನಂದವನ್ನುಂಟು ಮಾಡಿದವು.

**ಬಲರಾಮ**—ಕೃಷ್ಣಾ! ಧರ್ಮವಿದ್ದಲ್ಲಿ ಜಯವಿರುವುದು. ಆದರಿಂದ ನಮಗೆ ಈ ಉತ್ಸವಾನಂದವು ಲಭಿಸಿತು.

**ಭೀಷ್ಮಕರಾಜ**—ಶ್ರೀಕೃಷ್ಣಪರಮಾತ್ಮಾ!

**ಕಂ||** ಶರಣಾಗತರಂ ಪಾಲಿಪ |
ಕರುಣಾಕರ ಲೋಕನಾಥ ನೀನೆಂಬುದ ತಾ ||
ನರಿಯದೆ ರುಕ್ಮಿಯೊಡರ್ಚಿದ |
ದುರಾಗತವ ನಿಂದು ಮನ್ನಿಸುತೆ ಪೊರೆಯಮ್ಮಂ || ೬೦ ||

ನೀನು ಮಾಯಾತೀತನಾದ ಜಗದೀಶ್ವರನೆಂದು ನಿನ್ನ ಅದ್ಭುತ ಚರ್ಯೆಗಳನೇಕೆಗಳಿಂದ ತಿಳಿದರೂ, ನಾವು ಅಜ್ಞಾನದಿಂದ ನಿನ್ನನ್ನು ಸಾಮಾನ್ಯ ಮನುಷ್ಯನೆಂದರಿತು, ನಿನ್ನ ವಿಷಯದಲ್ಲಿ ಅಪರಾಧಗಳನ್ನು ಮಾಡುತ್ತಲೇ ಇರುವೆವು. ಸರ್ವಶಕ್ತನೂ ಭಕ್ತಾನುಗ್ರಹತತ್ಪರನೂ ಆದ ನೀದಲ್ಲದೆ, ಶರಣಾಗತರಾಗಿರುವ ನಮ್ಮನ್ನು ಮನ್ನಿಸಿ ಕಾಪಾಡುವರು ಯಾರು? ಅವಿವೇಕ ಸಹವಾಸದಿಂದ ನಮ್ಮ ರುಕ್ಮಿಯು ನಿನಗಪರಾಧವಮಾಡಿ, ತಕ್ಕ ಫಲವನ್ನು ಪಡೆದನು. ಪುತ್ರವ್ಯಾಮೋಹದಿಂದ ನಾನು ಅವನ ಇಷ್ಟವನ್ನು ಸ್ವಲ್ಪಮಟ್ಟಿಗೆ ಅನುಮೋದಿಸಿ ಅಪರಾಧಿಯಾದೆನು. ಜಗನ್ನಾಟಕ ಸೂತ್ರಧಾರಿಯಾದ ನಿನ್ನ ಸಂಕಲ್ಪವನ್ನರಿಯದೆ, ನಾವುಗಳು ಈವರೆಗೂ ಮಾಡಿರುವ ಸರ್ವಾಪರಾಧಗಳನ್ನೂ ಮನ್ನಿಸಿ, ನಮ್ಮನ್ನನುಗ್ರಹಿಸಬೇಕು. ರುಕ್ಮಿಣಿಯು ನಿನ್ನವಳಾಗಿಯೇ ಇರುವಳು. ಇನ್ನು ವಿವಾಹಮಂಗಳವನ್ನು ಕ್ರಮವಾಗಿ ನಡೆಯಿಸಲು ನಮಗೆ ಅಪ್ಪಣೆಯನ್ನು ಕೊಡು.

**ಕೃಷ್ಣ**—ಭೀಷ್ಮಕರಾಜೇಂದ್ರಾ! ನಿನ್ನ ವಿನಯೋಕ್ತಿಗಳಿಂದ ನನಗೆ ಬಹಳ ಸಂತೋಷವಾಯಿತು. ಲೋಕದಲ್ಲಿ ಮನುಷ್ಯರಿಗೆ ತಮ್ಮ ಮದಮಾತ್ಸರ್ಯಾದಿ ದುರ್ಗುಣಗಳೇ ತಮಗೆ ಶತ್ರುಗಳಾಗಿ ಪರಿಣಮಿಸಿ, ಸನ್ಮಾರ್ಗಕ್ಕೆ ಕತ್ತಲೆಯನ್ನು ಕವಿಸುವವು. ವಿವೇಕವೆಂಬ ಬೆಳಕಿನಲ್ಲಿ ಸತ್ಪಥವನ್ನು ಅನುಸರಿಸಿ ನಡೆಯದಿದ್ದರೆ, ಅಜ್ಞಾನಾಂಧಕಾರ ವರ್ತನೆಯಿಂದ ದುಃಖಕೂಪಕ್ಕೆ ಬೀಳುವುದು ಸಹಜವು; ಇದರಿಂದ ಇನ್ನಾದರೂ ಆ ದುಷ್ಟ

ಶಿಶುಪಾಲಾದಿಗಳ ಸ್ನೇಹದಲ್ಲಿರದಂತೆ ರುಕ್ಮಿಕುಮಾರನಿಗೆ ಬುದ್ಧಿಯನ್ನು ಹೇಳು. ನನ್ನ ಮತ್ತು ರುಕ್ಮಿಣಿಯ ಮನೋಭಾವಗಳು ಸ್ಪಷ್ಟವೇ ಆಗಿರುವುದರಿಂದ ವಿವಾಹಮಂಗಳದ ವಿಷಯದಲ್ಲಿ, ನೀನು ನನ್ನನ್ನು ಹೊಸದಾಗಿ ಪ್ರಾರ್ಥಿಸಬೇಕಾದುದೇನು ! ನಿನ್ನ ಇಷ್ಟದಂತೆಯೇ ಆಗಲಿ.

**ಭೀಷ್ಮಕರಾಜ**—ಬಹಳ ಸಂತೋಷ. (ರುಕ್ಮಿಣಿಯನ್ನು ಕರೆತರುವನು.)

(ರುಕ್ಮಿಣಿಯೂ ಕೃಷ್ಣನೂ ಪರಸ್ಪರ ಸುಮಮಾಲೆಗಳನ್ನು ಧರಿಸುವರು.)

**ಎಲ್ಲರೂ—ಕಂ||** ಜಯಲೋಕತ್ರಯಭರಣಾ |
ಜಯ ತೇಜೋ ವಿಚಿತಕೋಟಿ ದಿನಕರಕಿರಣಾ ||
ಳಳ ಜಯ ಸನ್ಮಂಗಳ ಕಾರಣ ||
ಜಯ ಕರುಣಾಭರಣ ರುಕ್ಮಿಣೀಪ್ರಿಯರಮಣಾ ||೬೧||

---

ಇಳೆಗೆ ಸುವರ್ಷಂ ಸೂಸುತೆ |
ಫಲಿಸುಗೆ ಭೂಭಾಗಮುಖಿಲ ಜನಕಾನಂದಂ ||
ಬೆಳೆಯುಗೆ ಗೋಕುಲ ವೊಳ್ಪಂ |
ತಳೆಯುತೆ ವರ್ಧಿಸುಗೆ ರುಕ್ಮಿಣೀಶನ ಕೃಪೆಯಿಂ || ೬೨||

ಚತುರ್ಥಾಂಕಂ

# ಶ್ರೀ ರುಕ್ಮಿಣೀಸ್ವಯಂವರ ನಾಟಕಂ

**ಸಂಪೂರ್ಣಂ.**

---

ಕಂ|| ಸುರುಚಿದ ದುರ್ಮತಿ ಸಂವ | ತ್ಸರ ಕಾರ್ತಿಕ ಶುಕ್ಲ ನವಮಿ ಬುಧವಾರಂ ಸಂ ||
ದಿರೆ ನರಹರಿದಯದೊರೆದಂ | ನರಹರಿಕವಿ ರುಕ್ಮಿಣೀಸ್ವಯಂವರ ಮನಿದಂ ||

ಶ್ರೀ

# ರುಕ್ಮಿಣೀ ಸ್ವಯಂವರ

## ( ಅನುಬಂಧ )

ಪುಟ ೧ ೧ ರಾಗ ಕೀರವಾಣಿ—ರೂಪಕತಾಳ (ವರಮುಲೊಸಗಿ)

ಸೂತ್ರಧಾರ—ಕಮಲನಯನ ಪಾಲಯ ಶ್ರೀ | ಕರುಣಾಕರ ಗೋಪಾಲ || ಪ ||

ವಿಮಲ ಕಲಾಧರ ವದನ | ಯಮಿ ಮನೋಂಬುರುಹ ಸದನ || ಅ ||

ಜಲಧಿಕನ್ಯಾಮುಖ | ಜಲಜ ತರುಣತರಣಿತೇಜ || ಕಲುಷಕುಲಾನಲ ವಿಮಲ ||
ಕಲಿತವಿಭವ ಭೂರಿಬಲ || ಲಲಿತವೇಣುಗಾನ ನಿರಾ | ಕುಲ ದಿವಿಜಾನಂದಕರ |
ಜಲದರುಚಿ ವಿರಾಜಮಾನ | ಜಲಜನಾಭ ನೃಹರಿ ಕೃಷ್ಣ || ೧ ||

ಪುಟ ೧ ೨ ರಾಗ ಮಾಂಡ್—ರೂಪಕತಾಳ

ನಾರದ—ಕಮಲನಯನ ಕಲುಷಭಂಜನ | ಶೌರೇ || ಪ ||

ಭುವನಭರಣ ಭೂರಿಕರುಣ | ಭವಸಂಹಾರಣ ನಿಪುಣ |ದಿವಿಜಶರಣ ಶ್ರೀವಿತರಣ||೧||
ಗರುಡಗಮನ ಗಾನಲೋಲ | ಕರಿರಾಜಾವನಶೀಲ | ಶರದನೀಲ ವಿವಿಧ ಲೀಲ ||೨||

ಪುಟ ೨ ೩ ರಾಗ ಹಂಸಧ್ವನಿ—ಆದಿತಾಳ

ವೈತಾಳಿಕರು—ಧರೇಂದ್ರಚಂದ್ರ ದಾನವೇಂದ್ರ ಸಾಂದ್ರವೈಭವ || ಪ ||

ಸುರಾಳಿ ಹೃತ್ಕರಾಳ ವಿಲಯ ಕಾಲಭೈರವ || ಅ ||

ನರಾಧಿರಾಜ ವಂದಿತ ಪ್ರತಾಪ ವಿಶ್ರುತ | ವಿರೋಧಿವೇಘಮಾರುತ ಪರಾಕ್ರಮಾ
ದ್ಭುತ || ಸುರಾರಿವಂಶ ವಾರಿರಾಶಿ ನವಸುಧಾಕರ | ಸುರಾಧಿರಾಜ ಮಾನಸೋತ್ಪಲ
ಪ್ರಭಾಕರ || ಆಯುಷ್ಯಂ ವಿಜಯಂ ತೇಜಂ | ಶ್ರೇಯಸ್ಸಂತಾನಂ ಸಿರಿಯುಂ |
ನಿರಂತಮಾಗೆ ನಿತ್ಯ ಸೌಖ್ಯಮಾಂತು ರಂಜಿಸೈ || ೧ ||

ಪುಟ ೧೦ ೪ ರಾಗ ನಾಗಸ್ವರಾವಳಿ—ತಾಳ

ಜರಾಸಂಧ—ಕಡುಕೆಡುಗರ ತಲೆಯೊಡೆದಿಡುವೆನೀಗ || ಪ ||

ತಡವಿಡದೆ ಸಾರಿ | ಬಿಡದಳವ ತೋರಿ || ಅ ||

ಕೇಡಿಗರಾ ಶೌರ್ಯ | ನೋಡಿದೊಡಾಶ್ಚರ್ಯ || ಹುಡುಗರನು ಮೆಟ್ಟಿ | ಪುಡಿಪುಡಿಯಕುಟ್ಟಿ |೧
ಆಮಧುರೆಯ ಸೇರಿ | ಕಾಮಾಂಧರ ಮಾರಿ || ತರಿದುರಿಸಿ ಬರ್ಪೆ |ನೆರೆ ಛಲವತೋರ್ಪೆ||೨||

ಪುಟ ೧೦ ೫ ರಾಗ ಕುರಂಜಿ—ರೂಪಕತಾಳ

ನಾರದ—ಶ್ರೀಮನೋಹರಲೀಲ ನಮೋಹರೇ | ಸಾಮಗಾನವಿಲೋಲ ನಮೋ ಹರೇ ||
ಸೋಮಭಾಸ್ಕರ ನೇತ್ರ ನಮೋ ಹರೇ | ಶ್ರೀಶವಾಹಿ || ಪ ||
ದಾನವಾನ್ವಯಕಾಲ ನಮೋ ಹರೇ | ದೀನಪಾಲನಶೀಲ ನಮೋ ಹರೇ ||
ಗಾನ ನರ್ತನಲೋಲ ನಮೋ ಹರೇ | ಶ್ರೀನಿಧಾನ ||೧||
ಮೌನಿಸಂತತಿಗೀತ ನಮೋಹರೇ | ವೈನತೇಯವರೂಥ ನಮೋ ಹರೇ |
ಜ್ಞಾನಮಂಗಳ ದಾತ ನಮೋ ಹರೇ | ಶ್ರೀಮುಕುಂದ || ೨ ||

ಪುಟ ೧೧ ೬ ರಾಗ ಮೋಹನ—ಆದಿತಾಳ

ಕೃಷ್ಣ ಬಲರಾಮರು—ತಳಿದೆವು ಮನದಮಿತಾಮೋದವ || ಪ ||
ಸುಜನಹಿಂಸನ | ಕುಜನಕಂಸನ | ವಿಜಯಶಂಸನ | ವೀರೋತ್ತಂಸನ || ಭುಜಗಳ
ಮುರಿದು| ನಿಜಬಲಮಳಿದು | ತ್ರಿಜಗಕೆ ಸುಖವನು | ಸೃಜಿಸುತೆ ಭರದೊಳು|| ೧ ||
ಲಲಿತಯಾದವ| ಕುಲದೆ ಭೇದವ | ನೆಳಸಿಕೋಪವ | ತಳೆದ ದಾನವ|| ಖಳನನೆ ಪಿಡಿದು|
ಕರುಳನೆ ಬಗೆದು | ಬಲದೊಳು | ಛಲವನು | ಗೆಲಿದೆವು | ನಲಿದೆವು || ೨ ||

ಪುಟ ೧೨ ೭ ರಾಗ ಕಾನಡ—ಆದಿತಾಳ

(ಒಳಗೆ)— ಮಾಧವ ಗೋಪಾಲ | ಮಂಜುಳಲೀಲಾ || ಪ ||
ನೀರದ ಶ್ಯಾಮಲ | ನಿರುಪಮಶೀಲ || ನಾರದ ನುತಲೀಲ | ನವವನಮಾಲ|| ೧ ||
ವಾಸವಪೂಜಿತ | ವರಗುಣಭರಿತ || ರಾಸಕೇಳೀವಿಭವ | ರಮಾಧವ || ೨ ||

ಪುಟ ೧೫ ೮ ರಾಗ ನಾದನಾಮಕ್ರಿಯ—ಆದಿತಾಳ

ಮಕರಂದ—ಭಲೀ ಭಲೀ ಭಲೆ ನನಗೆಣೆಯಾರೀ ಮೂರು ಲೋಕದಲ್ಲಿ || ಪ ||
ಮಾರನ ರೂಪವ | ಮೀರಿದ ಲಲಿತಾ | ಕಾರನು ಧೀರನು | ದಾರನು ನಾಂ||
ಶೂರನು ನಾಂ | ಸಾರಿಹೆನು | ಶೌರಿಯ ಬಳಿಯನು | ಸೇರುತೆ ಮುದದೊಳು | ಸಾರ
ವಿನೋದವನಾಡುವೆನು || ಕಾಲಕೆ ಭೋಜನ | ವೇಳೆಗೆ ಶಯನ | ಮೇಲೆ ಫಲಾಹಾರ
ಗಳೆನಗೆ || ಮೇಲೆನಿಪಾ ಲೀಲೆಯೊಳು | ಓಲಾಡುತೆ ನಲಿದಾ ನಂದದೆ ಗೋ | ಪಾಲನ
ಜೊತೆಯೊಳಗಾಡುವೆನು || ೨ ||

ಪುಟ ೧೬ "ತಣ್ಣಗೆ ಬೀಸುತ್ತಿರುವುದು" ಎಂಬ ಮಾತಾದ ಮೇಲೆ

ಮಕರಂದ— ರಾಗ ಬೇಹಾಗ್—ಆದಿತಾಳ

ಎಂತಿರ್ಪುದೀವನ | ವಿಂತುರೆ ನೋಡೆ ||ಪ||

ಸಂತಸದಿಂ ಕೃಷ್ಣನಿಂದೊಲಿದಾಡೆ || ಕಾಂತೆಯರ ಕೂಡಿ ಲೀಲೆಯನಾಡೆ ||ಅ||

ಕೋಗಿಲೆ ಗೈವಾ ರಾಗವ ಕೇಳಿ | ರೇಗುವುದೆನ | ಗೀಗ ಮನ || ೧ || ಹೆಚ್ಚಾದ ಹೂಗಳ ವಾಸನೆಯೆಲ್ಲ | ಮುಚ್ಚಿತು ಮೂಗಿನ ಸೊಳ್ಳೆಯನೆಲ್ಲ || ೨ || ಕಲಕಲಶಬ್ದದಿ ಗಿಳಿಗಳ ಗುಂಪು | ಕಿಲಕಿಲ ನಗುವಂತೆ ಮಾಳ್ಪುದು ರಂಪು || ೩ || ಒಳ್ಳೆಯ ವನದಲ್ಲಿ ಕೃಷ್ಣನಿಗಾಟ | ಬಳ್ಳಿಯ ಮನೆಯಲ್ಲಿ ಸೊಳ್ಳೆಯ ಕಾಟ || ೪ ||

ಪುಟ ೧೬ ೯ ರಾಗ ಸಾರಂಗ—ಆದಿತಾಳ

ಉಪವನ ಮೆಸೆವುದು ಕೋಕಿಲಗಾನದಿ || ಪ ||

ಸುಪರಿಮಳಾಂಕ ಸುಮೋತ್ಕರ ದೆಸೆಯುತ| ವಿಪುಲ ಶುಭಾಕರಮಾಗಿ || ಅ ||

ಕೋಕಿಲ ಶುಕಕಲಗಾನ | ಕೋಕನದಾದಿ ಪ್ರಸೂನ | ಕೇಕಿ ನರ್ತನ ಮುದ ಮಾಯೆ || ೧ || ಕೌಸುಮ ಪರಿಮಳಭಾರ | ವಾಸಿತ ಮಂದಸಮೀರ | ಸೂಸುವ ಪೂಮಳೆಯಿಂದ || ೨ ||

ಪುಟ ೧೭ ೧೦ ರಾಗ ಜಂಜೂಟಿ—ರೂಪಕತಾಳ

ಕೃಷ್ಣ—ಪರಮಾನುರಾಗ ಸಾರೆ ಬಾರೆ | ಪಲ್ಲವಾಧರೇ || ಪ ||

ಶರದಿಂದು ಕಿರಣ ವಿಮಲಹಾಸ | ಮೆರಸಿ ಮೋದವ || ವಿರಚಿಸುತೆ ಬಾರೆ ರಾಧೆ ಸರಸ ಕೋವಿದೇ || ರಾಧೆ ಮನದ ಭೇದಮಳಿದು | ಮೋದಮೊಂದಿಸೆ || ಮಾಧವನಾಂ ಬಂದೆ ನೋಡು | ಮಧುರಭಾಷಿಣೀ || ೨ ||

ಪುಟ ೧೮ ೧೧ ರಾಗ ಯಮುರ್ನಾ—ಆದಿತಾಳ

ರಾಧೆ—ಶ್ಯಾಮಸುಂದರ | ಪ್ರೇಮವ ತೋರೋ || ಪ ||

ಕೋಮಲಕಾಯ ದಯಾಮಯ ಬಾರೋ || ಅ ||

ಸುರುಚಿರ ಲೀಲೆಯಿಂ | ಸರಸ ವಿನೋದವ | ಕರುಣದೆ ಬೀರುತೆ | ಹರುಷಿಪುದೆನ್ನ || ಸುಂದರಾಕಾರಾ | ನಂದಕುಮಾರ | ನೊಂದಿಹ ನನಗಾ | ನಂದಮೆಸಗು ನೀ || ೨ ||

ಪುಟ ೧೯ ೧೨ ರಾಗ-ಶಂಕರಾಭರಣ—ಆದಿತಾಳ

ರಾಧೆ—ಕೃಷ್ಣಾ ಗೋಪೀನಂದನ | ಕೃಷ್ಣಾಂಬುದಾಕಾರ | ಬಾರೋ || ಪ ||
ಕ್ಷೋಣಿಪಾಲ ಘನಶೀಲ ಕನಕಮಯ | ವೇಣುಗಾನಲೋಲ | ಗೀ| ರ್ವಾಣ ವಿನುತ ಲೀಲಾರಮ್ಯ || ೧ || ನಿತ್ಯಮಂಗಳಾಕಾರ ಮೌನಿಗಣ | ನುತ್ಯ ಸುಗುಣವಾರ | ಘನ | ಸತ್ಯಧರ್ಮ ಸಾರ | ಶ್ರೀಶ || ೨ ||

ಪುಟ ೨೦ ೧೩ ರಾಗ-ಬೇಹಾಗ್—ಆದಿತಾಳ

ನಾರದ—ನಂದಕುಮಾರನೆ | ನಾನಾವತಾರನೆ || ಪ ||
ಸುಂದರ, ನತಜನ | ಮಂದಾರ ಜಯಜಯ || ಅ ||
ವಾರಿಜನಯನ | ವರಗುಣಸದನ || ಸೂರಿಜನಾವನ | ಸುತ್ರಾಮ ಶರಣ || ೧ ||
ತಾಪಸವಿನುತ | ನಯಗುಣ ಭರಿತ | ಶ್ರೀಪರಿಪೂರಿತ | ಶೀತಾಂಶುವದನ || ೨ ||

ಪುಟ ೨೨ ೧೪ ರಾಗ-ದೇಶಿತೋಡಿ—ಆದಿತಾಳ

ಕೃಷ್ಣ—ಕಡುಜಡರ | ಪಡೆಯ | ಬಿಡದೆ | ಕಡಿದು | ಪೊಡವಿ | ಗಿಡುವೆ | ಸುಡುವೆ ಸಮರ ಮಾಡಿ || ಪ || ಕೂಡಿ ಬಲವ | ಮಾಡಿ ಛಲವ | ಕಾಡುತೆ ಖಳರ || ಬಡಿವೆ | ಸುಡುವೆ | ಹೂಡುತೆ ಹಠವ || ೧ || ಬೀರಿ ಶರವ | ತೋರಿ ಬಲವ | ವೈರಿನಿಕರವ || ಹರಿಸಿ | ಉರಿಸಿ | ದುರಾತ್ಮರನಿರಿವೆ || ೨ ||

ಪುಟ ೨೩ ೧೫ ರಾಗ-ಹಂಸಧ್ವನಿ—ಏಕತಾಳ

ಶಿಶುಪಾಲ—ತಲೆ ಹಾರಿಸುವೆನು ಸಲೆ ಸಾರಿ || ಪ ||
ಅಧಮನವನಲಾ | ದುರ್ಮದಶೀಲ | ವಧಿಪೆನವನಾಂ ಶೌರ್ಯವಿಶಾಲ ||
ಪದದಿಂ | ದೊದೆದಾಂ | ಸದೆವೆಂ | ಹೃದಯಾ | ಮೋದಮಾಂತು || ೧ ||
ಬಲವಿಹೀನನಾ | ಖಳ ಪಶುಪಾಲ | ಛಲದೊಳಿಹೆನಲಾ | ಕಲಿ ಶಿಶುಪಾಲ ||
ಖಳಗೋ | ವಳನಂ | ಛಲದಿಂ | ದಳಿದು | ಧೂಳಿಗೈವೆ || ೨ ||

ಪುಟ ೨೩ ೧೬ ರಾಗ-ಹಂಸಧ್ವನಿ—ಆದಿತಾಳ

ಕೃಷ್ಣ—ರಾಮ ಗುಣಧಾಮ ಬಾ | ರಣಜಯ ಘನಬಲ || ಪ ||
ಸೋಮ | ಧಾಮ | ಮನದೊಳು | ಘನಮುದ | ವನು ತಳೆಯುತೆ ಬಲ ||ಅ||
ಬಲರಾಮ—ಬಾರೈ | ಮುರಳೀಧರ | ಪರಬಲ ಹುತವಹ || ಪ ||
ವೀರ | ಧೀರ | ಮದಿಸಿದ ರಿಪುಗಳ | ವಧಿಸುವುದುಚಿತವು || ಅ ||

ಕೃಷ್ಣ—ನೀಲಾಂಬರ | ಲೀಲಾಕರ | ಕೇಳಾರಿಪು | ಜಾಲಂ ಮಿಗೆ | ಖೂಳತನವ ತಾ
ನೆಸಗಿತು ಪರಿಪರಿ || ೧ ||

ಬಲರಾಮ—ಶರಗಳಿ | ನರಿಗಳ | ಶಿರಗಳ| ತರಿಯುತ| ಧುರದೊಳು | ಭರದೊಳು |
ನೆರೆ ಜಯವೊಂದುವ || ೧ ||

ಕೃಷ್ಣ—ಹಿಂಸಕ ಕಂಸನಂ | ಧ್ವಂಸಗೈದಂಶವಂ | ಕೇಳುತ ನಿಜಸುತೆಯರ ಮುಖದಿಂ |
ಕಾಲನ ತೆರದೊಳು ಮಿಗೆ ಕೆರಳಿ | ಕಾಳಗಕುರೆ ಬರುತಲಿ ಛಲದಿ || ಖೇದಗೊಂಡು |
ಮಗಧಾಧಿ ರಾಜನುರೆ | ಬಾಧಿಸೆ ಬರ್ಪನು | ಯಾದವಕುಲವನು || ೨ ||

ಬಲರಾಮ—ಆ ಜರಾಸಂಧನ | ನ್ನಾಜಿಯೊಳ್ ಮರ್ದಿಸಿ || ಯಾದವರಿಗೆ ಪಿರಿದೊದ
ಗಿರುವಾ | ಬಾಧೆಯನುರೆ ಪರಿಹರಿಸುತಲಿ | ಮೋದವನವರಿಗೆ ವಿರಚಿಸುವ || ಕಾಲ
ನೋಲ್ ಮಗಧ | ಪಾಲ ದುಷ್ಟ ಶಿಶು | ಪಾಲ ಮುಖ್ಯ ಭೂ | ಪಾಲರ ವಧಿಸುವ ||

ಪುಟ ೨೪ ೧೭ ರಾಗ—ತಾಳ

ಜರಾಸಂಧನ ಪಕ್ಷ—ನೀಚರೇ, ನಿಲ್ಲಿನೀಂ | ನಾಚದೆ | ತೋಚದೆ | ವಾಚಿಪುದೇತಕೆ||
ಕೃಷ್ಣಬಲರಾಮರು—ಶಿಕ್ಷಿಪೆ| ವೀಕ್ಷಿಸೋ| ಲಕ್ಷಿಸ| ದೀಕ್ಷಣ| ರಾಕ್ಷಸ ನಿಮ್ಮನು ||ಪ||
ಜರಾ—ಕಡುಗಲಿಗಳೊಳಾಟ| ಕೇಡು ಸಂಕಟ|| ಕೊಡುವುದಲ್ತೆ ನೀಚಾ| ಬೇಡವೀಹಠ ||
ಕೃಷ್ಣಬಲರಾಮರು—ಅಧಮದನುಜಪಾಲ | ಮದದೊಳೇಂ ಫಲ | ಒದರಲೇತಕೋ
ಖಳಾ | ಬುಧಜನಾಕುಲ ||
ಜರಾ—ಬಿಡದೆ | ಪಿಡಿದು | ಪೊಡೆಯ | ಕಡಿದು | ಪೊಡವಿ | ಗಿಡುವೆವೀಕ್ಷಣ || ೧ ||
ಕೃಷ್ಣಬಲ—ಪದದೊ | ಳೊದೆದು | ಮದವ | ಸದೆದು | ವಧಿಪೆ | ವಧಮ ನಿಮ್ಮನು ||

---

## ದ್ವಿತೀಯಾಂಕಂ

ಪುಟ ೨೫ ೧೮ ರಾಗ ಯಮುನಾ—ಆದಿತಾಳ

ನಾರದ—ಮನುಮುನಿವಂದ್ಯಹರೇ | ಮಾಧವ ಗೋವಿಂದಹರೇ || ಪ ||
ಭುವನಾಧಾರ ನಿರ್ವಿಕಾರ || ಭೂತದಯಾಮಯ ಶೌರೇ ಜಯಜಯ || ೧ ||
ಜಲದಾಕಾರ | ಜ್ಞಾನಸಾರ | ಜನ್ಮಜರಾಪರಿಹಾರ ಜಯಜಯ || ೨ ||

ಪುಟ ೨೮ ೧೯ ರಾಗ ಹಂಸಧ್ವನಿ—ಆದಿತಾಳ

ಬಲರಾಮ ಕೃಷ್ಣರು—ಧುರಾಗ್ರದೊಳು ವಧಿಸುವ ರಿಪುಕುಲವ || ಪ ||
ಪರಾಕ್ರಮದೊಳುಂಸುವ ಪರಬಲವ || ಅ ||
ದುರ್ಮದಾಂಧತೆಯೊಳುರೆ ನಡೆತರುವ | ಧರ್ಮಘಾತುಕರ ತಲೆಗಳ ತರಿವ ||
ಸುಜನವ್ರಜಕಾಂ | ಸುಖಮಾಗಿಸುತುಂ | ವಿಜಯೋತ್ಸವದಾ | ವಿಭವದೆ ನಲಿವ || ೧ ||
ಪರಶುರಾಮರಾ ಱತಿಸಿದ ತೆರದಿ | ಗಿರಿಯ ದುರ್ಗವಂ ಸೇರುತೆ ಭರದಿ ||
ಅರಿಭೂಪರನಾ | ವಿರಿದಾಹವದಿ | ಧರಣೀಧುರವಂ | ಪರಿಹರಿಸುವ ಬಾ || ೨ ||

ಪುಟ ೨೯ ೨೦ ರಾಗ-ಜಂಜೂಟಿ—ಆದಿತಾಳ

ಮದಿರಾಂಗನೆ—ಈ ಮನೋಹರಂ | ಕಾಮಿನೀ ಹೃದಯಾನಂದನೀ || ಪ ||
ಸ್ಮರನೋ ರಮಾ | ವರನೋ ವಿಭಾ | ಕರತೇಜದಿಂತು | ನೆರೆ ರಂಜಿಸುವನೀ ||೧||
ಸುಂದರಾಂಗನಾ | ನಂದಲೀಲೆಯ | ನೊಂದಲೀ ಮನ | ವಿಂದು ಬಯಪುದಾಹಾ ! ||

ಪುಟ ೩೦ ೨೧ ರಾಗ ಕೇತಾರ—ರೂಪಕತಾಳ

ಬಲರಾಮ—ವಿಧು ಸಮಾನನೆ ಯಾವ ಮೋಹನೆ ! ಮಧುರಾವಲೋಕನೆ || ಪ ||
ಮದೋಚ್ಚಲಿತೆ| ಮುದಾಕಲಿತೆ | ಸುಧಾಭರಿತ | ಮೃದೂಕ್ತಿಯುತೆ ||ಅ||
ಮಂದಯಾನದಿಂ | ದಿಂದುಹಂಸವ | ನಿಂದಿಸುತ್ತಾ | ನಂದ ಲೀಲೆಯಿಂ || ಬಂದು
ಬೆಡಗಿ| ನಿಂದೆ ನೋಡುತೆ| ನಿಂದಿರ್ಪಳು | ಕಂದರ್ಪನ| ಸುಂದರಿಯೆಂ | ಬಂದದೊಳೀ|೧
ಕಾಂತೆ ಸುಸ್ಮಿತ | ಕಾಂತಿಯಿಂದೆ | ನ್ನಂತರಂಗವ | ಭ್ರಾಂತಿಗೈದಳು || ಮುಂತು
ಭಾರ್ಗವ | ರಂತು ಪೇಳಿದ| ಕಾಂತೆಯು ಘನ | ಶಾಂತೆಯು ಗುಣ | ವಂತೆಯುತಾ|
ನಿಂತಿವಳೋ || ೨ ||

ಪುಟ ೩೧ ೨೨ ರಾಗ ಜಂಜೂಟಿ—ರೂಪಕತಾಳ

ಬಲರಾಮ—ಲಾಲಿಸೇ ಗಂಭೀರ ಭಾಷಿಣೀ ಮನ್ಮಾನಸತೋಷಿಣೀ || ಪ ||
ಲೀಲಾಕರೇ ಸುರಾಂಗನಾವತಾರೇ || ಬಾಲಿಕೆ ಗುಣ | ಮಾಲಿಕೆ ಸುಖ |
ಲಾಲಸೆ ಮದಿ | ರಾಲಸೆ ನೆರೆ || ಅ ||
ಅಂಗಭವ ಮೋಹನೆಯೇ | ತುಂಗತರ ಗುಣ ನಿಲಯೇ | ಭೃಂಗಕುಂತಳ ನಿಚಯೇ |
ಮಂಗಳಾಂಗಿಯೆ ಸದಯೇ | ನಿನ್ನಯಕೃಪೆ | ಯನ್ನೆಳೆಸುವೆ | ಹಲಾಯುಧನು |
ಬಲಾಂಕಿತನು || ೧ ||

ಪುಟ ೩೨ ೨೩ ರಾಗ ಬೇಹಾಗ್—ಆದಿತಾಳ

ಮದಿರಾಂಗನೆ—ಸುಂದರಾಕಾರ | ಸಂದಿಹುದೆನಗತ್ಯಾನಂದ || ಪ ||

ಇಂದುವದನ ಗುಣಭೂಷಣ || ಅ ||

ಚಾರುವಿಲಾಸಾ | ಚಂದ್ರಿಕಾಹಾಸಾ | ಸಾರಶೃಂಗಾರ ರಸಾಧಾರನೇ || ೧ ||

ಕರುಣಾಸಾರ | ವರಿಸುತಲೆನ್ನ | ಪೊರೆದೆ ವಂದಿಪೆನಿನಗಾನಂದದಿಂ || ೨ ||

ಪುಟ ೩೨ ೨೪ ರಾಗ ಮೋಹನಕಲ್ಯಾಣಿ—ಆದಿತಾಳ

ಲಕ್ಷ್ಮಿ—ಜಯಲೋಕಾಧಾರ ಸುಂದರ || ಪ ||

ಭಯದೂರ ಜಯ ಶ್ರೀಧರ || ಅ ||

ಇಂದಿರಾಹೃದಯಾ | ನಂದ ಮುಕುಂದ | ಸಿಂಧುರವರದಾ | ನಂದಮಯ || ೨ ||

ಬೃಂದಾರಕವರ | ವಂದಿತಚರಣ | ಸಿಂಧುಶಯನ ಗೋ | ವಿಂದ ಸದಯ || ೨ ||

ಪುಟ ೩೪ ೨೫ ರಾಗ ನೋಟ್—ಏಕತಾಳ

ಜರಾಸಂಧಾದಿಗಳು—ನಡೆಯಿರೈ | ನಡೆಯಿರೈ | ಸುಡುವನಾವು | ಕೆಡುಗರ || ಪ ||

ಆ | ಕಂಸನ ಕೊಂದವರನ್ನು | ವಿ | ಧ್ವಂಸವ ಮಾಳ್ಪುದಕಿನ್ನು || ಅ ||

ಘನ | ಶೈಲವ ಮುತ್ತುವ ಸಾರಿ | ಶಿಖಿ | ಜ್ವಾಲೆಯ ಹಚ್ಚುವ ಮಾರಿ ||

ಪಶು | ಪಾಲನ ರಾಮನ ಕೊಂದು | ನಿ | ರ್ಮೂಲವ ಗೈವುದ ಕಿಂದು || ೧ ||

ಪುಟ ೩೫ ೨೬ ರಾಗ ಕಮಾಚ್ —ಝಂಪಕತಾಳ

ಕೃಷ್ಣ ಬಲರಾಮರು—ಶಿರವರಿದು ತರಿದು ಭರದುರಿಸಿ ಬಹೆವು || ಪ ||

ದುರುಳರೆಲ್ಲರನು ಧುರದೊಳು ನಾಂ || ಅ ||

ಜರಾಸಂಧಾದಿಗಳು—ತಲೆಯೊಡೆದು ಕಡಿದಪೆವು ಜಡರೆನಿಮ್ಮ || ಪ ||

ಛಲದಿ ಖಡ್ಗಗಳ ಝಳಪಿಸುತಲಿ || ಅ ||

ಕೃಷ್ಣ ಬಲರಾಮರು—ಅಟ್ಟಿ ಬಂದು ಮಿಗೆ| ಬಿಟ್ಟು ಬಾಣಗಳ| ಕಟ್ಟಿ ಪಿಡಿದು ಪುಡಿ|

ಗುಟ್ಟಿ ನೀಚರೇ || ಸುಟ್ಟು ಪಾವಕನೊ | ಳಟ್ಟಹಾಸದಿಂ |

ನೆಟ್ಟನೈದುವೆವು | ಪಟ್ಟು ಮುದವ || ೧ ||

ಜರಾಸಂಧಾದಿಗಳು—ತಗ್ಗಿಸುತ್ತ ತಲೆ | ನೆಗ್ಗಿ ನಿಮ್ಮ ಘೋ | ರಾಗ್ನಿಗೀಗಲೇ |

ನುಗ್ಗಿಸುತ್ತಲಿ || ಹಿಗ್ಗಿ ನಿಮ್ಮನುರೆ | ಭಗ್ನಮಾಳ್ಪೆವಿಂ |

ದೊಗ್ಗಿನಿಂದೆ ಮದ | ಮುಗ್ನ ಖಳರೆ || ೧ ||

ಪುಟ ೩೭ ೨೭ ಶ್ರೀರಾಗ—ರೂಪಕತಾಳ

ಶಿಶುಪಾಲ—ಏನನಾಂಪೇಳಲಿ | ಮೌನಿಪುಂಗವರೇ | ಘನಾಪಮಾನವನಹಾ ! || ಪ ||

ದ್ರೋಹಿ ಬಲಕೃಷ್ಣರು ಗಿರಿ || ದಾಹದಲಿ ತೋರ್ದಮಿತ | ಸಾಹಸವನು |

ಮೋಹನಾಸ್ತ್ರ| ದಾಹತಿಯೊಳು | ಮೋಹಗೊಳಿಸಲೀ ||೧||

ಜರಾಸಂಧ—ಠಕ್ಕು ಮಿಗೆ ವೈಷ್ಣವಶರ | ದಿಕ್ಕುತೆ ಕಿರೀಟಗಳ | ದಿಕ್ಕಿಗೊಂದ |

ನಿಕ್ಕುತೆಮೆಗೆ | ದಕ್ಕದಂತೆ ಹಾರಿಸಿರುವರೇ ನನಾಂ || ೨ ||

ಪುಟ ೩೯ ೨೮ ರಾಗ ತೋಡಿ—ಆದಿತಾಳ

ಜರಾಸಂಧಾದಿಗಳು—ಛಲಛಲ ಬಲುಹರುಷವ ತಳೆದೆವೀಗ || ಪ ||

ಭೂಪಮಂಡಲಿ ಸೇರಿರುವಲ್ಲಿ | ಗೋಪಬಾಲನಾಟೋಪವದೆಲ್ಲಿ || ೧ ||

ಸಂಧಿಕಲ್ಪಿಸಿ | ನಿಂದಿಸಿ ಕುಂದಿಸಿ | ಮಂದಮತಿಗಳಂ | ದಂದುಗಪಡಿಸೆ || ೨ ||

ದುರ್ಮದಾಂಧರ | ಪೆರ್ಮೆಯಡಗಿಸಿ | ಮರ್ಮಸಂಧಿಯಂ | ನಿರ್ಮಿಪೆವಿಂದು ||೩||

ಪುಟ ೩೯ ೨೯ ರಾಗ ಹಿಂದುಸ್ಥಾನಿಕಾಪಿ—ಆದಿತಾಳ

ನಾರದ—ಗೋಕುಲಾನಂದ ಹರೇ | ಜಯ ಹರೇ || ಪ ||

ಸನಕಸನಂದನ | ವಿನುತ ಲೋಕಾವನ || ದನುಜವಿದಾರಹರೇ | ನೃಹರೇ ಶೌರೇ ||೧||

ಭವಭಯಶೋಷಣ| ನವಮೃದುಭಾಷಣ| ಸುವಿಮಲ ಗುಣಾಭರಣಾ| ಕರುಣಾಕರ||೨||

---

## ತೃತೀಯಾಂಕಂ

ಪುಟ ೪೫ ೩೦ ರಾಗ-ಯಮ್ಮು—ಆದಿತಾಳ

ನಾರದ—ಪಾಲಯ ಕರಿವರಪಾಲ | ನರಹರೇ || ಪ ||

ಕಾಲಾಂಬುದ ಸಮನೀಲ || ಅ ||

ನಿಗಮನುತಾದ್ಭುತ | ಸುಗುಣಾಲಂಕೃತ | ಜಗತೀಪಾಲನ ಶೀಲ || ೧ ||

ಪರಮ ಶುಭಾಕರ | ಪಾವನರೂಪ | ಪರ್ವಸುಧಾಕರ ಹಾಸ || ೨ ||

ಪುಟ ೪೮ ೩೧ ರಾಗ—ಆದಿತಾಳ

ಕೃಷ್ಣ ಮಕರಂದರು—ಕೊರಚಿಯ ವೇಷವ | ನೆರೆ ತಾಳಿರುವೆ || ಪ ||

ನೆರೆ ತಾಳಿರುವೆ | ಭರದಿಂ ನಡೆವೆ || ಅ ||

ಕುಟಿಲ ಕುಂತಲಿಯೊಳು | ನಟನೆಯ ಮಾಡುತೆ | ಸಟೆಯನೆ ನಾಂ ಬಲು | ದಿಟದ ಪೊಲೊರೆವೆ || ೧ || ಅರುಹುತೆ ಕಣಿಯನು | ತರುಣಿಯ ಮನವನು || ಪರಿಕಿಸಿ ಮಾರ್ಗಕೆ | ತಿರುಗಿಪೆ ನಾನು || ೨ ||

ಪುಟ ೫೦ ೩೨ ರಾಗ—ಆದಿತಾಳ

ಸಖಿಯರು—ಭಾಮಿನಿ ಬಾರಮಣೀ | ಗುಣಮಣೀ || ಪ ||

ಶ್ರೀ ಮಹಿತೇ ಪೂರ್ಣಕಳಾ | ಸೋಮಮುಖೀ ಸಖೀ || ಅ ||

ರುಕ್ಮಿಣಿ—ಸುಂದರ ಮಂದಾರ | ಕುಂದ ಕುಸುಮವಾರ || ನವಗಂಧ ವಹನಂದವಾನಂದ | ಸಖೀ || ೧ ||

ಸಖಿಯರು—ಬಂಧುರಮಣಿಮಾಲಾ | ಕಂಧರೆ ನವಲೀಲಾ | ಸುವಿಕಾಸ | ದರಹಾಸೇ| ಸುವಿಲಾಸೇ | ಸಖೀ || ೨ ||

ಪುಟ ೫೫ ೩೩ ರಾಗ-ಕಲ್ಯಾಣಿ—ಆದಿತಾಳ

ಮಕರವ್ವ—ಹೇಳುವೆ ನಾ ಕಣಿಯ | ಅಮ್ಮಯ್ಯಾ|| ಕಾಳಿಯ ಪದಕೆರಗುತೆ ಮನದಣಿಯ|| || ಪ ||

ಅರಗಿಣಿಯಾಹೆಣ್ಣು | ಇವಳಾ | ಹರಿಸವಿಯುವ ಹಣ್ಣು || ಕರಿಹುಡುಗನವೋಲಿವಳಿಗೆ ಕಣ್ಣು || ೧ || ಕರಿಯನ ವರಿಪುದಕೆ | ವಿಘ್ನವು | ಬರುವುದು ಪರಿಣಯಕೆ || ನೆರೆ ರಕ್ಕಸಗೀ ಹೆಣ್ಣೊಳು ಬಯಕೆ || ೨ || ಕಂಡರೆ ನಿನಗವನು | ಮನಸಿಗೆ | ಕೆಂಡದ ಪರಿಯಿಹನು || ಗಂಡನು ನಾನೇ ಎಂದು ನಲಿವನು ||೩|| ಮದುವೆಗೆ ಮೊದಲಹುದು | ಮಧ್ಯದಿ | "ಕದನವದೊದಗುವುದು || ವಿಧವಿಧದಾಶ್ಚರ್ಯವು ನಡೆಯುವುದು || ೪ ||

ಪುಟ ೫೭ ಪಙ್ಕ್ತಿ ೧೫ ೩೩ (ಎ) ರಾಗ-ಬೇಹಾಗ್—ಏಕತಾಳ

ರುಕ್ಮಿಣಿ—ಪ್ರಿಯ ಗೋಪೀತನಯ | ಘನಚ್ಛಾಯ | ಜಯಸಾಧನ | ಜನಮೋಹನ ||ಪ||

ಯದುಕುಮಾರ | ಸದಯ ಧೀರ || ಹೃದಯೇಶನೇಂ | ಮುದಮಾವನೇ || ೧ ||

ನಿರುತಮವನ | ಚರಣ ಯುಗವ | ಸ್ಮರಿಪೆನ್ನನೇಂ | ನೆರೆ ನೋಳ್ಪನೇ || ೨ ||

ಪರಮ ಮಹಿಮಾ | ಕರನ ಪ್ರೇಮ | ಬರುವಂದದೇ | ನುರೆನೋಂತನೇ || ೩ ||

ಪುಟ ೫೯ ೩೪ ರಾಗ-ಸುರುಟಿ—ರೂಪಕತಾಳ

ಶಿಶುಪಾಲ—ಬೆದರದಿರೆಲೆ | ಮಧುರ ವಾಣಿ | ಸದಯೆ ನೀಲವೇಣಿ || ಪ ||

ವಿಧವಿಧದಲಿ ಸೇವಿಸಿ ಹಿತ | ಮೊದಗಿಸುವೆನು ರಾಣಿ || ಅ ||

ರುಕ್ಮಿಣಿ—ಕ್ಷಮಿಪುದು ಪದ | ಕಮಲಕೆ ಮಿಗೆ | ನಮಿಸಿಬೆಳ್ಪೆ ಭೂಪಾ || ಪ ||
ರಮಣಿಯೊಳಿದು | ಸಮನೆನಿಸದು | ಭ್ರಮೆಯ ವ್ಯಥಾಲಾಪ || ಅ ||
ಶಿಶುಪಾಲ—ಹರಿಣ ಲೋಚನೇ |
ರುಕ್ಮಿಣಿ—ತರವೆ ಸೂಚನೇ ? ||
ಶಿಶುಪಾಲ—ವರಿಪೆನೆನುತೆ| ಭರವಸವನು | ಕರುಣಿಸೆನಗೆ ಕಾಂತೆ |
ರುಕ್ಮಿಣಿ—ನರವರ ಇದು | ತರವೆನಿಸದು | ಪಿರಿದು ಹೇಡಿಯಂತೆ ||
ಶಿಶುಪಾಲ—ಲೋಕ ಮೋಹಿನೀ |
ರುಕ್ಮಿಣಿ—ಸಾಕು ತೆರಳು ನೀಂ || ೧ ||

ಪುಟ ೬೩ ೩೫ ರಾಗ-ಬೇಹಾಗ್—ಆದಿತಾಳ

ನಾರದ—ವಿನತಾನಂದನ ವರೂಥಪಾಲಯ | ವಿನತಾನಂದಹರೇ || ಪ ||
ಘನಗುಣ | ಗಾನಲೋಲ ಸ | ಮಾನರಹಿತ ಮ | ಹಾನುಭಾವ ಹರೇ || ಅ ||
ಜ್ಞಾನವಿಶಾಲ | ದಾನವ ಕಾಲ| ದೀನಾವನ ವಿಮಲ || ಸುರುಚಿರ| ಭಾನುಕೋಟಿ
ಪ್ರಕಾಶ ಮಹಿಮ ನಿ | ಧಾನ ಯದುತನಯ || ೧ ||

---

## ಚತುರ್ಥಾಂಕಂ.

ಪುಟ ೭೯ ೩೬ ರಾಗ-ಶಂಕರಾಭರಣ—ರೂಪಕತಾಳ

ಕೃಷ್ಣ—ಪರಮ ಮೋದವ ನಾಂತೆನೀಗ | ನಿರುಕಿಸುತಲಿ | ನಾರಿ | ಮಾರಿ | ಕೋರಿ |
ಸರಸದೆ | ಬರೆದಿಹ | ಪರಿಯನು || ಪ ||
ನೀರೆಯಾ ಲಾವಣ್ಯವಂ|| ನೀರೇಜಾಕ್ಷಿಯ ಗುಣಮಂ | ನಿರುತವು ಕೇಳುತಲೀಮನ |
ಸರಸಿಜ ಮುಖಿಯೊಳ್ || ಸಾರಿ ಸೇರಿ ಮಾರಹತಿಯ | ನಾಂತಿರ್ಪೆನು | ಚಿಂತಾಬ್ಧಿ |
ಮಿಂತು | ಶಾಂತಿ | ಯಾಂತುದಿಂದು || ೧ ||

ಪುಟ ೮೦ ೩೭ ರಾಗ-ಹಂಸಧ್ವನಿ—ಝಂಪತಾಳ

ಕೃಷ್ಣ—ಭ್ರಷ್ಟ ದಾನವರಥಟ | ದೆಷ್ಟಿಹುದು ನೋಳ್ಪೆ || ಪ ||
ಮುಷ್ಟಿಯೊಂದರೊಳವರ | ಪಿಷ್ಟವನೆ ಮಾಳ್ಪೆ || ಅ ||

ಶ್ರೇಷ್ಠವಸ್ತುವೊಳಮಿತ | ದುಷ್ಟ ರಾಕ್ಷಸರೀಗೆ | ಲಿಷ್ಟಪಡಲಿಂತವರ | ರಿಷ್ಟ ಕಾರಣವು || ೧ || ಅಂತಕನ ಪುರಿಗೈದ | ಲಿಂತವರಿಗೀ ಬುದ್ಧಿ | ಯಂತರಂಗದೊಳು ದಿಸಿ | ತಂತ್ಯ ಕಾಲಕ್ಕೆ || ೨ || ದುರ್ಮದಾಂಧರನೆಲ್ಲ | ನಿರ್ಮೂಲ ಮಾಡುತ್ತ | ನಿರ್ಮಲಾಂಗಿಯ ವರಿಸಿ | ಪೆರ್ಮೆಯಂ ತಳೆವೆ || ೩ ||

ಪುಟ ೮೩ ೩೮ ರಾಗ—ಆಟತಾಳ ಚಾಪು

ರುಕ್ಮಿಜರಾಸಂಧಾದಿಗಳು—ಜಯ ಘೋಷದಿಂದಲಿ ಸಾರುವ ಪರಿ | ಜಯದ ಮಂಟಪ ಸೇರುವ ||ಪ|| ಸುಯಶೋವಿಕಾಸದೆ ಭೂರಿ ಹರ್ಷೋರ್| ದಯವನುರ್ವಿಗೆ ಬೀರುವ||ಅ||

ಬಲಶಾಲಿಯಿಾ ಶಿಶುಪಾಲ ಭೂ ಪರಿ | ಪಾಲನಂ ಗುಣಶೀಲನಂ ||
ಅಳಿ | ನೀಲಕುಂತಳೆ ಬಾಲೆ ರುಕ್ಮಿಣಿ | ಲೀಲೆಯಿಂ ವರಿಪಲ್ಲಿಗೆ || ೧ ||

ಪುಟ ೮೩ ೩೯ ರಾಗ-ಬೇಹಾಗ್—ಆದಿತಾಳ

ರುಕ್ಮಿಣಿ—ಮುದವಾಂತೆ ಮದಿರ ಲೋಚನೇ || ಪ ||
ಯದುಕುಲ ತಿಲಕನ ಕಾರುಣ್ಯದಿ || ಅ ||

ಶ್ರೀ ಮಹಿಮಾಕರ | ಸ್ವಾಮಿಯು ಕಳುಹಿದ || ಪ್ರೇಮ ನಿರೂಪದಿ | ಭಾಮಾ ಮಣೀ || ೧ || ಸಲೆ ಮದನಾಗ್ನಿಯ | ಸಾಕ್ಷಿಯೊಳೆನ್ನಂ || ಒಲಿದು ವರಿಸಿದುದ | ತಿಳಿಸಿರ್ಪನು || ೨ ||

ಪುಟ ೮೮ ೪೦ ರಾಗ-ಮೂಂಡ್—ಆದಿತಾಳ

ರುಕ್ಮಿಣಿ—ದೇವನುತ ವಸು | ದೇವಸುತ | ಪಾವನ ಮೌನಿ | ಭಾವಹಿತ || ಪ ||
ಭಾವಿಸಿ ಬಂದು | ಕಾವನದೆಂದು | ಶ್ರೀವರನೆನ್ನನು | ಕೈವಿಡಿದು || ಅ ||

ವಿಜಯ ವಿಲಾಸ | ವಿಮಲ ಸುಹಾಸ | ಸುಜನ ಸುಖಂಕರ | ಗುಣಭಾಸ ||
ತ್ರಿಜಗದಧೀಶ | ಬಿಜಯಗೈದೆನ್ನೊಳು | ನಿಜಕೃಪೆ ತೋರ್ಪನೇ | ಗಜಗಮನೇ || ೧ ||

ಪುಟ ೮೫ ೪೧ ರಾಗ-ವಸಂತ—ಝಂಪತಾಳ

ರುಕ್ಮಿಣಿ—ದೇವ ಯದುನಾಥ ಪರಿಪೂತ ಪೊರೆ ಮಾಧವ || ಪ ||
ದೇವ ಮುನಿಪಾವನತ ಪಾವನ ಪದಾಂಭೋಜ || ಅ ||

ಶ್ರೀವಾಸ ಗುಣಭಾಸ | ಶಿಷ್ಟ ಹೃದಯಾವಾಸ | ದೇವಾಧಿದೇವ ಸಂ | ಭಾವಿತ ಕೃಪಾಶೀಲ || ೧ || ಶರಣಾರ್ತಿ ಭಂಗ ಘನ | ಕರುಣಾಂತರಂಗ | ವರರುಕ್ಮಿಣೀ ಹೃದಯ | ಸರಸೀಜ ಭೃಂಗ || ೨ ||

ಪುಟ ೮೬ ೪೨ ರಾಗ-ಬೇಹಾಗ್—ಆದಿತಾಳ

ನಾರದ—ಯದುಕುಲ ತಿಲಕ ಗೋಪಾಲ ||ಪ|| ವಿಧುಕಿರಣಾಮಲ ಹಾಸವಿಶಾಲ ||ಅ||

ನಿರುಪಮಶೀಲ | ನಿರ್ಜರ ಪಾಲ | ವರಮುನಿನುತ ಮಹಿಮ | ಶ್ರೀಧಾಮ ||೧||

ಸತ್ಯಶುಭೋದಯ | ನಿತ್ಯನಿರಾಮಯ | ಸ್ತುತ್ಯ ಸಕಲ ಸುಗುಣ | ಶ್ರೀರಮಣ ||೨||

ಪುಟ ೮೯ ೪೩ ರಾಗ-ಶಂಕರಾಭರಣ—ಏಕತಾಳ

ರುಕ್ಮಿ—ಅಧಮ ಬಿಡುಬಿಡೆಲೊ ಕಂಜಾಕ್ಷಿಯ || ಪ ||

ಸುದತಿಯ ಚೌರ್ಯದೊ | ಳದೆಂತು ಪಿಡಿಯುತೆ | ಪದವಿಡುವೆಯೊ ಛೀ | ಮದಾಂಧ

ವಧಿಸುವೆನಾ | ನೀಕ್ಷಣ | ಛೀ || ೧ ||

ಕೃಷ್ಣ—ಖಳನೆ ನಡೆನಡೆಯೊ ಛೀ ! ಮೂರ್ಖನೇ || ಪ ||

ಒಲಿಯುತೆ ತಂದಿಹೆ | ವಿಲಾಸಿನಿಯ ಮಿಗೆ | ಪಲತೆರದೊದರದೆ | ಪಲಾಯನವನೆಸಗಿ|

ಜೀವಿಸು | ನೀಂ | ಖಳನೆ | || ೧ ||

ರುಕ್ಮಿ—ವಿಧವಿಧ ಘನಶರ ಜಾಲವ ಬಿಡುತೆ | ವಧಿಸುತೆ ನಿಮಿಷದೆ ಧರಾತಲಕೆ ಕೆಡಹಿ |

ನಿನ್ನನು | ನಾಂ | ನಲಿವೆ | ಬಿಡುಬಿಡೆಲೊ || ೨ ||

ಕೃಷ್ಣ—ದುರುಳನೆ ನಿನ್ನಯ ಶಿರವನು ನಿಮಿಷದಿ | ತರಿದಿಡುವುದು ನನಗಸಾಧ್ಯಮೆನಿಸದು

ಕೇಳ್ | ಪಾಲಿಪೆ | ನಾಂ | ನಿನ್ನ | ನಡೆನಡೆಯೋ || ೨ ||

## || ಮಂಗಳಂ ||

ಪುಟ ೯೩ ೪೪ ರಾಗ-ಕಲ್ಯಾಣಿ—ಆದಿತಾಳ

ಎಲ್ಲರೂ—ಜಯ ಜಗದೀಶ | ಲಕ್ಷ್ಮೀಶ || ಪ ||

ಸುರವಿನುತ ಶುಭಾ | ಕರ ಘನ ಚರಿತ | ಕರುಣಾಕರ ಸುಖ | ಕರಗುಣ ಭರಿತ ||

ಗಾನಲೋಲ ಜಯ | ಘನಸಮನೀಲ || ಮೌನಿಜಾಲನುತ ಮಹಿಮ ವಿಶಾಲ ||

ಮಾನ್ಯರುಕ್ಮಿಣೀ ಲೋಲ ಸುಶೀಲ | ಮಂಗಳಮಾವುದು ಯದುಬಾಲಾ || ೧ ||

## ಮಂಗಳಮಸ್ತು.

* ಈ ಗುರುತು ಹಾಕಿರುವ ಕಡೆಯಲ್ಲಿ ಆ ಪಾತ್ರವು ಹಿಂದೆ ಹಾಡಿದ ಹಾಡಿನ ಕಡೆಯ ನುಡಿಯನ್ನೇ ಹಾಡಬಹುದು.

ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಶ್ರೀ ನರಸಿಂಹರಾಜ ರೋಡ್, ಬೆಂಗಳೂರು ಸಿಟಿ